ವೈಜಯಂತೀಮಾಲೆ ಕುಸುಮ ೧.

# ದೃಷ್ಟಿಲಾಭ.



ವ್ಹಿ. ಎಮ್. ಇನಾಮದಾರ,
ಬಿ. ಎ. (ಆನರ್ಸ)

ಕರ್ನಾಟಕ ವೈಭವ ಪ್ರಕಟನಾಮಂದಿರ ವಿಜಾಪುರ.

೧೯೩೭.

# ಅನುಕ್ರಮಣಿಕೆ.







# ಶುದ್ಧಿಪತ್ರಿಕೆ.

ಅಚ್ಚಿನ ಕೆಲಸದಲ್ಲಿ ಅವಸರವಾದ ಮೂಲಕ ಮುದ್ರಾದೋಷಗಳು ಹೇರಳವಾಗಿ ಉಳಿದಿವೆ. ವಾಚಕರು ದಯವಿಟ್ಟು ಮೊದಲೇ ತಿದ್ದಿಕೊಂಡು ಓದಬೇಕೆಂದು ಪ್ರಾರ್ಥನೆ.

| ಪುಟ. | ಪಂಕ್ತಿ | ತಪ್ಪು. | ಒಪ್ಪು. |
|---|---|---|---|
| ೩ | ೧೦ | ಮಾಡಿದ | ಮಡಿದ |
| ೪ | ೯ | ಕುರುಬನು | ಕುರುಡನು |
| ೧೦ | ೪ | ತನ್ನ ಕೊಂಕಣದಲ್ಲಿಯ | ಕೊಂಕಣದಲ್ಲಿಯ ತನ್ನ |
| ೧೧ | ೧೧ | ಏನೂ | ಏನು |
| ೧೨ | ೧೯ | ಸೂಮ್ಮನೆ | ಸುಮ್ಮನೆ |
| ೧೬ | ೧೨ | ಹಿಡಿದ್ದರಿಂದ | ಹಿಡಿದದ್ದರಿಂದ |
| ೨೦ | ೫ | ಸಮುದಾಯಲ್ಲಿ | ಸಮುದಾಯದಲ್ಲಿ |
| ೨೨ | ೨೦ | ರೀತಿಯಿಂದ ಯಾಗಿ | ರೀತಿಯಿಂದ |
| ೨೭ | ೧ | ಅವರಲ್ಲಿ ವಿಷಯದ | ಅವರ ವಿಷಯದಲ್ಲಿ |
| ೩೦ | ೩ | ಮಂಜಳ | ಮಂಜುಳ |
| ೩೦ | ೧೯ | ಧರ್ದು | ಧರ್ಮ |
| ೫೮ | ೩ | ತಾನು | ತಾವು |
| ೫೮ | ೪ | ತಿನ್ನುವದೆಂಬ | ಎಂಬ |
| ೬೨ | ೧೩ | ಕೀಲಯನ್ನೇ | ಕೀಲಿಯನ್ನೇ |
| ೬೨ | ೧೫ | ನಿನ್ನಿದು | ನಿನ್ನದು |
| ೬೬ | ೨೧ | ಏದುರಿನ | ಎದುರಿನ |
| ೬೭ | ೭ | ಹೇಳಿತ್ತಿದ್ದ | ಹೇಳುತ್ತಿದ್ದ |
| ೬೯ | ೨ | ಚತುರ್ಭಜ | ಚತುರ್ಭುಜ |
| ೭೦ | ೧೮ | ಅಕಳ | ಆಕಳ |
| ೮೦ | ೧೦ | ಏನೂ? | ಏನು? |
| ೮೫ | ೧೬ | ಫುನರ್ವಿವಾಹ | ಪುನರ್ವಿವಾಹ |

# ಶ್ರೀ. ಖಾಂಡೇಕರರ ಅಲ್ಪ ಪರಿಚಯ.



ಮೂಲ ಲೇಖಕರಾದ ವ್ಹಿ. ಎಸ್ ಖಾಂಡೇಕರರು, ಸಾಂಗಲಿಯಲ್ಲಿ ೧೮೯೮ ನೇ ಇಸವಿಯಲ್ಲಿ ಜನ್ಮ ತಾಳಿದರು. ಇವರು ಪ್ರಾಥಮಿಕ ಶಿಕ್ಷಣ ವನ್ನೂ ಮಾಧ್ಯಮಿಕ ಶಿಕ್ಷಣವನ್ನೂ ಅಲ್ಲಿಯೇ ಮುಗಿಸಿ, ಫರ್ಗ್ಯುಸನ್ ಕಾಲೇಜಿನಲ್ಲಿ ಅಭ್ಯಾಸ ನಡೆಸಿದರು. ಇಂಟರ ಮಿಡಿಏಟ ಕ್ಲಾಸಿನಲ್ಲಿ ಓದು ತ್ತಿರುವಾಗ ಕಕ್ಕನಿಗೆ ದತ್ತಕ ಹೋಗುವ ಸಲುವಾಗಿ ಕಾಲೇಜನ್ನು ಬಿಟ್ಟದ್ದು ಬಿಟ್ಟೇಹೋಯಿತು. ಮುಂದೆ ೧೯೧೬ ರಿಂದ ೧೯೨೦ ರ ವರೆಗೆ ಶಾರೀರಿಕ ಅಸ್ವಾಸ್ಥ್ಯದ ಮೂಲಕ ಯಾವದನ್ನೂ ಮಾಡಲಿಕ್ಕಾಗಲಿಲ್ಲ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಮೇಲ್ತರಗತಿಯಲ್ಲಿ ಪಾಸಾಗಿದ್ದ ಮೂಲಕ ಕಾಲೇ ಜಿನಲ್ಲಿ ಸ್ಕಾಲರಶಿಪ್ ಮುಂತಾದವು ಸಿಗುತ್ತಿದ್ದವು. ಆದರೆ ದತ್ತಕದಮೂಲಕ ಇಡೀ ಆಯುಷ್ಯದ ಪ್ರವಾಹವೇ ಬದಲಾಗಿ ಹೋಯಿತು.

೧೯೨೦ ನೇ ಇಸವಿಯಲ್ಲಿ ಶಾರೀರಕ ಅಸ್ವಾಸ್ಥ್ಯವು ತುಸು ಕಡಿಮೆ ಯಾಗಿ ಗುಣವೆನಿಸಹತ್ತಿದ ಕೂಡಲೆ ಹಳ್ಳಿಗಳಲ್ಲಿ ಶಿಕ್ಷಣ ಪ್ರಸಾರದ ಅವಶ್ಯ ಕತೆಯು ಬಹಳವಾಗಿದ್ದುದರಿಂದ ೧೯೩೦ ನೇ ಇಸ್ವಿಯ ಉಪ್ಪಿನ ಸತ್ಯಾ ಗ್ರಹದ ಸಲುವಾಗಿ ಹೆಸರಾದ ಶಿರೋಡೆ ಎಂಬಲ್ಲಿ ಅದೇ ಹೊಸದಾಗಿ ಹೊರಟ ಇಂಗ್ರೇಜೀ ಶಾಲೆಯನ್ನು ಮತ್ತಿಷ್ಟು ಸ್ಥಿರವಾಗಿ ಮಾಡಿ ಬೆಳೆ ಸುವ ಕೆಲಸವನ್ನು ಕೈಕೊಂಡರು. ಕಳೆದ ೧೭ ವರ್ಷ ಅಲ್ಲಿಯೇ ಹೆಡ್

ಮಾಸ್ತರರಾಗಿ ಕೆಲಸ ಮಾಡುತ್ತಿರುವರಲ್ಲದೆ ಶಾಲೆಯ ಸಂಸ್ಥೆಯಾವರೂ ಒಳ್ಳೇ ರೀತಿಯಾಗಿ ಬೆಳೆದು, ಕೆಲಸ ಮಾಡುವಂತೆ ಹಣಗಾಡಿದ್ದಾರೆ. ಸಾವಂತವಾಡಿಯಲ್ಲಿ ೧೯೨೪ ರಲ್ಲಿ ಹೊರಟ 'ವೈನತೇಯ' ಎಂಬ ವೃತ್ತ ಪತ್ರದ ವಾಙ್ಮಯ ವಿಭಾಗದ ಸಂಪಾದಕರೆಂದೂ ಇತ್ತೀಚೆಗೆ ಮುಂಬೈ ಯಲ್ಲಿಯ 'ಜ್ಯೋತ್ಸ್ನಾ' ಮಾಸಿಕದ ಮುಖ್ಯ ಸಂಪಾದಕರೆಂದೂ ಕೆಲಸ ಮಾಡುತ್ತಿದ್ದಾರೆ. ಹಳ್ಳಿಗಳಲ್ಲಿಯ ಶಿಕ್ಷಣ ಪ್ರಸಾರದ ಕಾರ್ಯವನ್ನು ಶ್ರೀ. ಖಾಂಡೇಕರರಿಗೆ ಅವರ ದತ್ತಕ ತಂದೆಯವರ ಇಚ್ಛೆಯ ವಿರುದ್ಧ ವಾಗಿಯೇ ಕೈಕೊಳ್ಳಬೇಕಾಯಿತು. ಶಾಲೆಯನ್ನು ಊರ್ಜಿತ ಸ್ಥಿತಿಗೆ ತರ ಬೇಕಾದ್ದರಿಂದ ಆದಷ್ಟು ಕಡಿಮೆ ಪಗಾರದ ಮೇಲೆಯೇ ಕೆಲಸ ಮಾಡು ತ್ತಬಂದರು. ಕಳೆದ ೨೦ ವರ್ಷಗಳಿಂದಲೂ ಶರೀರ ದಾರಿದ್ರ್ಯವು ಬೆನ್ನು ಹತ್ತಿಬಿಟ್ಟದೆ. ಅವರಿಗೆ ಬೇನೆ ಇಲ್ಲದ ತಿಂಗಳುಗಳೇ ಇಲ್ಲ. ಇದಲ್ಲದೆ ಎರಡು ಸಾರೆ ಸರ್ಪದಂಶವಾಗಿದ್ದು ೧೯೩೩ ನೇ ಇಸವಿಯಲ್ಲಿಯ ಸರ್ಪ ದಂಶವಾದ ಮೇಲಂತೂ ಪ್ರಕೃತಿಯ ಅಸ್ವಾಸ್ಥ್ಯವು ಬಹಳೇ ಹೆಚ್ಚಾಗಿದ್ದು ಹಾಗೂ ಹೀಗೂ ಜೀವನಯಂತ್ರ ಸಾಗಿದೆ.

## ವಾಙ್ಮಯ ಸೇವೆ.

೧೯೨೦ ರಿಂದ ೧೯೨೫ ರ ವರೆಗೆ ಶಾಲೆಯ ಏಳ್ಗೆಯ ಕೆಲಸ ಹೆಚ್ಚಾ ಗಿದ್ದರಿಂದ ವಿಶೇಷವಾಗಿ ಲೇಖನ ವ್ಯವಸಾಯವೇನೂ ಸಾಗಲಿಲ್ಲ. ಆದರೂ ಆ ಕಾಲದಲ್ಲಿ ಮುಖ್ಯವಾಗಿ ಬರೆದದ್ದೆಂದರೆ ಕವಿತೆ, ವಿನೋದ ಲೇಖಗಳು ಮತ್ತು ವಿಮರ್ಶೆ. ಇವುಗಳಲ್ಲಿ ವಿಮರ್ಶೆಗಳು ಬಹಳೇ ಲೋಕಪ್ರಿಯ ವಾಗಿವೆ. ೧೯೨೫ ರಲ್ಲಿ ಕಥಾಲೇಖನಕ್ಕೆ ಆರಂಭವಾಯಿತು. ಇಲ್ಲಿಯ ವರೆಗೆ ೧೬೦-೧೭೦ ಕಥೆಗಳು ಪ್ರಸಿದ್ಧವಾಗಿವೆ. (ಈ ಕಥೆಗಳೆಲ್ಲವೂ ಅವರ ಏಳು ಕಥಾಸಂಗ್ರಹಗಳಲ್ಲಿ ಕೂಡಿವೆ. "ನವಮಲ್ಲಿಕಾ" "ದತ್ತಕ ವ ಇತರ ಗೋಷ್ಟೀ" "ಜೀವನಕಲಾ" "ಊನ ಪಾವೂಸ" "ದವಬಿಂದು" "ವಿದ್ಯುತ್-ಪ್ರಕಾಶ" ಮತ್ತು "ನವಚಂದ್ರಿಕಾ") ೧೯೨೮ ರಲ್ಲಿ ಸಹೃದ ಯರ ಆಗ್ರಹದ ಮೂಲಕ ಇವರ ಕಾದಂಬರೀ ಲೇಖನಕ್ಕೆ ಸುರುವಾಯಿತು. ಇಲ್ಲಿಯವರೆಗೆ ೪ ಕಾದಂಬರಿಗಳು ಪ್ರಸಿದ್ಧವಾಗಿದ್ದು ('ಹೃದಯಾಚೀ ಹಾಕ'

"ಕಾಂಚನ ಮೃಗ" "ದೋನ ಧ್ರುವ" (ಇದರ ಕನ್ನಡ ಅನುವಾದವು ಮನೋಹರ ಗ್ರಂಥಮಾಲೆಯಲ್ಲಿ ಬೇಗನೆ ಹೊರ ಬೀಳುವದು.) ಮತ್ತು "ಉಲ್ಕಾ" ) ಐದನೇಯದಾದ "ಹಿರವಾ ಚಾಫಾ" 'ಜ್ಯೋತ್ಸ್ನಾ' ಮಾಸಿಕದಲ್ಲಿ ನಡೆದಿದೆ. ಈ ಕಥೆಕಾದಂಬರಿಗಳ ಹೊರತಾಗಿ ವಾಕ್ಪಟಗಳ ಸಲುವಾಗಿ ೧೯೩೬ರಲ್ಲಿ "ಛಾಯಾ" ೧೯೩೭ರಲ್ಲಿ "ಜ್ವಾಲಾ" ಮತ್ತು "ಮತ್ಸ್ಯಗಂಧಾ" ಕಥೆಗಳನ್ನು ಬರೆದು ಕೊಟ್ಟಿದ್ದಾರೆ ಇವುಗಳಲ್ಲಿ ಮೊದಲನೆಯದು ಹೊರಬಿದ್ದಿದ್ದು ಉಳಿದವು ಬೇಗನೆ ಹೊರಬೀಳಲಿವೆ. ಇದಲ್ಲದೆ ಅವರ ಪ್ರಸಿದ್ಧವಾದ ಇತರ ಪುಸ್ತಕಗಳೆಂದರೆ "ವಾಯುಲಹರಿ" ಎಂಬ ಲಘುನಿಬಂಧಗಳ ಸಂಗ್ರಹ, "ವನಭೋಜನ" ಎಂಬ ವಿಮರ್ಶಾಸಂಗ್ರಹ "ರಂಕಾಚೆರಾಜ್ಯ" ನಾಟಕ, ಶ್ರೀ ಗಡಕರಿ, ಮತ್ತು ಅಗರಕರ ಇವರ ವಿಷಯದಲ್ಲಿ ಚರಿತ್ರಾತ್ಮಕ ಮತ್ತು ಟೀಕಾತ್ಮಕ ಗ್ರಂಥಗಳು.

ಶ್ರೀ. ಖಾಂಡೇಕರರು ಬಡೋದೆಯಲ್ಲಿಯ ಕಥಾವಿಭಾಗ ಸಮ್ಮೇಲನ (೧೯೩೪) ಗೋಮಂತಕ ಸಾಹಿತ್ಯ ಸಮ್ಮೇಲನ (೧೯೩೫ ಪುಣೆಯ ಶಾರದೋಪಾಸಕ ಸಮ್ಮೇಲನ (೧೯೩೫) ಮುಂಬಯಿಯ ಮರಾಠಿ ಸಾಹಿತ್ಯ ಸಮ್ಮೇಲನ (೧೯೩೫) ಮತ್ತು ಸೊಲ್ಲಾಪುರ ಜಿಲ್ಲಾ ಸಾಹಿತ್ಯ ಸಮ್ಮೇಲನ (೧೯೩೬) ಇಷ್ಟು ಸ್ಥಳಗಳಲ್ಲಿ ಅಧ್ಯಕ್ಷಸ್ಥಾನವನ್ನು ವಹಿಸಿ ವಿಚಾರ ಪರಿಪ್ಲುತ ಭಾಷಣಗಳನ್ನು ಮಾಡಿರುವರು.

**ಮಹತ್ವದ ಸಂಸ್ಕಾರಗಳು.**

ಚಿಕ್ಕಂದಿನಲ್ಲಿ ಸಾಂಗಲಿಯಲ್ಲಿರುವಾಗ ಹರಿ ಕೃಷ್ಣ ದೇವ ಇವರ ತ್ಯಾಗ ಪೂರ್ಣ ಚರಿತ್ರೆಯು, ಶ್ರೀ. ಆಗರಕರ, ಶ್ರಿಪಾದ ಕೃಷ್ಣ ಕೊಲ್ಹಟಕರ ಮತ್ತು ಹರಿ ನಾರಾಯಣ ಆಪಟೆ, ಇವರ ವಾಙ್ಮಯದ ಪರಿಣಾಮವು ವಿಶೇಷವಾಗಿ ಶ್ರೀ. ಖಾಂಡೇಕರರ ಲೇಖನಾಭಿರುಚಿಯ ಮೇಲೆ ಆಗಿ ಲೇಖನದಲ್ಲಿ ಅವರಿಗೆ ಮಾರ್ಗದರ್ಶಕರಾದ ಶ್ರೇಯಸ್ಸು ಅವರಿಗೆಯೇ ಅದೆ. ೧೯೧೪-೧೫ ರಲ್ಲಿ ಪುಣೆಯಲ್ಲಿರುವಾಗ ಅಲ್ಲಿಯ ಸುಪ್ರಸಿದ್ಧ ನಾಟಕ ಕರ್ತೃಗಳಾದ ರಾಮ ಗಣೇಶ ಗಡಕರಿ ಇವರ ಪರಿಚಯವಾಗಿ ವಾಚನಕ್ಕೂ ಮತ್ತು ಲೇಖನೇಚ್ಛೆಗೂ ಹೊಸದಾರಿ ಸಿಕ್ಕಲು ಅನುಕೂಲವಾಯಿತು.

# ದೃಷ್ಟಿಕೋನ.



( ಅನುವಾದಕರು. )

ನಾನು ಕೈಕೊಂಡ ಭಾಷಾಂತರ ಕಾರ್ಯದ ಬಗ್ಗೆ ಕೆಲಕಾಲದ ಹಿಂದೆ ನನ್ನ ಮಿತ್ರರಾದ ಕನ್ನಡ ಸಾಹಿತಿಗಳೊಬ್ಬರು ನನಗೆ- ನೀವು ಇಂಥ ಎರಡನೇ ಮೂರನೇ ತರಗತಿಯ ಗ್ರಂಥಕರ್ತರ ಕೃತಿಗಳನ್ನು ಭಾಷಾಂತರಿಸುವದಕ್ಕಿಂತಲೂ ಸ್ವತಂತ್ರ ಕೃತಿಗಳನ್ನು ಎಷ್ಟೇ ಸಾಧಾರಣ ತರಗತಿಯವಾದರೂ ಅಡ್ಡಿಯಿಲ್ಲ- ರಚಿಸುವದು ಹೆಚ್ಚು ಶ್ರೇಯಸ್ಕರವೆಂದು ಹೇಳಿದರು. ಅವರೊಬ್ಬರು ಕರ್ನಾಟಕದಲ್ಲಿ ಹೆಸರುವೆತ್ತ ಸಾಹಿತಿಗಳಾದ್ದರಿಂದ ಅವರ ವಾಣಿಯು ಅಧಿಕಾರವಾಣಿಯು ಆದರೆ ಸರ್ವತೋಮುಖವಾಗಿ ಬೆಳೆಯುತ್ತಿರುವ ಇಂದಿನ ಕನ್ನಡ ಸಾಹಿತ್ಯದಲ್ಲಿ ಭಾಷಾಂತರಗಳಿಗೆ ಸ್ಥಾನವಿಲ್ಲೆಂಬ ಅವರ ಅಭಿಪ್ರಾಯವು ಸಾಹಿತ್ಯದ ಬೆಳವಣಿಗೆಯ

ನಿಜವಾದ ಕಲ್ಪನೆಯುಳ್ಳ ಯಾವ ಮನುಷ್ಯನಿಗೂ ಸಮ್ಮತವಾಗಲಾರದಂಥ ದೆಂಬದು ಎಂದು ನನ್ನ ಭಾವನೆ. ಇದಲ್ಲದೆ-ಖಾಂಡೇಕರರು ಎರಡನೇ ಮೂರನೇ ತರಗತಿಯ ಗ್ರಂಥಕರ್ತರಲ್ಲವೆಂಬದನ್ನು ತೋರಿಸಲಿಕ್ಕೆ ಪ್ರಸ್ತುತದ ಎಂಟೇ ಕಥೆಗಳು ಸಾಕು. ಅದನ್ನೊತ್ತಟ್ಟಿಗೆ ಬಿಟ್ಟರೂ ಕೂಡ ಸ್ವತಂತ್ರ ಕೃತಿಗಳಿಗಿದ್ದಷ್ಟೇ ಭಾಷಾಂತರಗಳಿಗಾದರೂ ಸಾಹಿತ್ಯದಲ್ಲಿ ಒಂದು ಮಹತ್ವ ಸ್ಥಾನವಿದೆ ಯೆಂದು ನನಗೆನಿಸುತ್ತದೆ. ಯಾಕಂದರೆ ಉತ್ತಮವೆನಿಸುವ ಭಾಷಾಂತರ ಗಳಾಗಬೇಕಾದರೆ ಲೇಖಕನು ಮೂಲದ ಪ್ರತಿಭೆಯನ್ನು ತನ್ನಲ್ಲಿ ಅರಗಿಸಿಕೊಂಡು ಅದನ್ನು ತನ್ನ ಭಾಷೆಯಲ್ಲಿ ಪ್ರತಿರೂಪಗೊಳಿಸಬೇಕಾಗುತ್ತದೆ. ಇಂಥ ಕೃತಿಗಳಿಗೆ ಕೀಳೆನ್ನುವದೆಂದರೆ ಹೊಸಕಾಲಮಾನಗಳಿಗನುಸರಿಸಿ ಹೊಸಹೊಸರೂಪಗಳನ್ನು ತಾಳುವ ಸಾಹಿತ್ಯವಿಭಾಗಗಳಿಗೆ ಎಡೆಗೊಡದೆ ಇರುವದೆಂದರೆ— ಸ್ವತಂತ್ರ ಕೃತಿಗಳ ಕರ್ತರ ವಿಪರೀತವಾದ ಅಭಿಮಾನವೋ, ಮಾತೃಭಾಷೆಯ ಬಗ್ಗೆ ಸರಿಯಲ್ಲದಷ್ಟು ಅತಿಶಯವಾದ ಆದರವೋ ತಮ್ಮ ನೆರೆಯ ಇನ್ನೊಂದು ಭಾಷೆಯ ವಿಷಯದಲ್ಲಿ ನಿಷ್ಕಾರಣವಾದ ದ್ವೇಷವೊ ಇಂಥದೆ ಇನ್ನಾವದೋ ಒಂದು ಸ್ತುತ್ಯವಲ್ಲದ ಕಾರಣವನ್ನು ಹುಡುಕಬೇಕಾಗುವದಲ್ಲದೆ ನ್ಯಾಯಪ್ರಾಪ್ತವಾದ ಮಾತೆನಿಸಲಾರದು.

ಪ್ರಪಂಚದ ಯಾವದೇ ಹೆಸರುವಾಸಿಯಾದ ಸಾಹಿತ್ಯದ ಇತಿಹಾಸವನ್ನು ಪರಿಶೀಲಿಸಿ ನೋಡಿದರೂ ಅದರ ಜನಕ ಕವಿಗಳು ಪ್ರಾರಂಭಿಸಿದ್ದು ಭಾಷಾಂತರ ಅನುಕರಣಗಳಿಂದಲೇ ಎಂಬದು ಸ್ಪಷ್ಟವಾಗಿ ತೋರುತ್ತದೆ. ಇಂದಿನ ಜಗದ್ವ್ಯಾಪಿಯಾದ ಆಂಗ್ಲಸಾಹಿತ್ಯದ ಉಗಮವು ಫ್ರೆಂಚ ಹಾಗೂ ಇಟಾಲಿಯನ್ ಭಾಷೆಯ ಕೃತಿ ರತ್ನಗಳ ಭಾಷಾಂತರಗಳಲ್ಲಿಯೇ ಇದೆಯೆಂಬದು ಆಂಗ್ಲ ಸಾಹಿತ್ಯದ ಸಮಾನ್ಯ ಪರಿಚಯವಿದ್ದವರು ಕೂಡ ಹೇಳಬಲ್ಲರು. ಪರಭಾಷೆಗಳಲ್ಲಿ ಯೋಗ್ಯವಾದದ್ದನ್ನು ಭಾಷಾಂತರಿಸಿಕೊಳ್ಳುವದೂ ಅನುಕರಿಸುವದೂ ನಮ್ಮ ಭಾಷೆಯಲ್ಲಾಗಲೀ ನಮ್ಮ ಜನರಲ್ಲಾಗಲೀ ಸ್ವತಂತ್ರ ಪ್ರತಿಭೆಯ ಕೊರತೆಯನ್ನು ತೋರಿಸುತ್ತವೆಂದು ತಿಳಿಯುವ ಕಾರಣವಿಲ್ಲ. ಅಸಂಸ್ಕೃ

ತಪ್ರತಿಭೆಯು ಎಲ್ಲಿಯೂ ಮುಟ್ಟಲಾರದು. ಸಂಕುಚಿತ ಸಂಸ್ಕಾರವುಳ್ಳ ಪ್ರತಿಭೆಗೆ ವೈಶಾಲ್ಯವು ಬರಲಾರದು. ಸಾಹಿತ್ಯವು ವಿಶಾಲವೂ ಉನ್ನತವೂ ಆಗಬೇಕಾದರೆ ಹೊರಗಿನ ವಿವಿಧ ಸಂಸ್ಕಾರಗಳನ್ನು ಅರಗಿಸಿಕೊಳ್ಳದ ಹೊರತು ಗತಿಯಿಲ್ಲ. ನಮಗೆ ಭಾಷಾಂತರಗಳಿಂದ ಕಲಿಯಬೇಕಾದದ್ದು ಇದೇ ಪರಸಾಹಿತ್ಯಗಳ ಸಂಸ್ಕಾರಗಳಿಂದ ನಮ್ಮಲ್ಲಿ ಸುಪ್ತವಾಗಿರುವ ಅನೇಕ ಗುಣಗಳನ್ನು ಜಾಗೃತಿಗೊಳಿಸಿ, ಲೇಖನಾಭಿರುಚಿಗೆ ಹೊಸ ದಾರಿ ತೋರಿಸುವದೇ ಭಾಷಾಂತರಗಳ ಮುಖ್ಯ ಕಾರ್ಯ. ಭಾಷಾಂತರದ ಪ್ರಸ್ತುತದ ಕೆಲಸವನ್ನು ಕೈಕೊಳ್ಳುವದರಲ್ಲಿ ನನ್ನ ಅಭಿಪ್ರಾಯವೆಂದರೆ ಈ ಕಥೆಗಳಲ್ಲಿ ನಮ್ಮ ಸಾಹಿತ್ಯಕ್ಕೆ ಹೊಸತಾದ ಒಂದು ಮಾರ್ಗವನ್ನು ತೋರಿಸುವ ಯೋಗ್ಯತೆಯಿದೆ ಎಂಬುದೇ. ದುರ್ದೈವದಿಂದ ನಮ್ಮ ಸಾಹಿತಿಗಳಲ್ಲಿ ಕೆಲವರು ಮರಾಟಿ ಭಾಷೆಯ ಬಗ್ಗೆಯೂ ಸಾಹಿತ್ಯದ ಬಗ್ಗೆಯೂ ಬಹುಮಟ್ಟಿಗೆ ಅನಾದರ ಅವಿಶ್ವಾಸಗಳನ್ನು ತೋರಿಸುತ್ತಾರೆ. ಅದಕ್ಕೆ ಕಾರಣಗಳನ್ನು ಹುಡಕುವದು ಕಠಿಣ. ಹುಡುಕಲಿಕ್ಕೆ ಇದು ಸ್ಥಾನವೂ ಅಲ್ಲ. ಆದರೆ ಈ ಜನರಲ್ಲಿಯ ಮರಾಟಿ ಭಾಷೆಯ ವಿಷಯಕ್ಕೂ ಸಾಹಿತ್ಯದ ವಿಷಯಕ್ಕೂ ಇದ್ದ ಅನಾದರ ಅವಿಶ್ವಾಸಗಳು ಕೆಲಮಟ್ಟಿಗಾದರೂ ಕಡಿಮೆಯಾಗಿ, ಉಚ್ಚ ಸಾಹಿತ್ಯವು ಯಾವ ಭಾಷೆಯಲ್ಲಿ ವ್ಯಕ್ತವಾದರೂ ಅದು ಉಚ್ಚವೇ ಎಂಬುದನ್ನು ನಿಷ್ಪಕ್ಷಪಾತದಿಂದ ಕಂಡುಕೊಂಡು ನಮ್ಮ ಸಾಹಿತ್ಯವು ಮುಂದೆ ಅಡಿ ಇಡುವಂತೆ ಅದರಲ್ಲಿಯ ಗುಣಗಳನ್ನಷ್ಟೇ ಆರಿಸಿಕೊಳ್ಳುವಂತಾದರೆ, ನನ್ನೀ ಅಳಿಲಸೇವೆಯು ಸಾರ್ಥಕವಾಯಿತೆಂದು ತಿಳಿಯುತ್ತೇನೆ.

ಈಗ ನಾನು ಭಾಷಾಂತರಿಸಿದ ಎಂಟು ಕತೆಗಳ ಕರ್ತೃಗಳಾದ ಶ್ರೀಮಾನ್ ವಿ. ಸ. ಖಾಂಡೇಕರರು ಇಂದಿನ ಮರಾಟಿ ಕಥೆಗಾರರಲ್ಲಿಯೂ ಕಾದಂಬರಿಕಾರರಲ್ಲಿಯೂ ಶ್ರೇಷ್ಠರೆನಿಸುವವರಲ್ಲೊಬ್ಬರು ಈ ಕಥೆಗಳನ್ನು ೧೦ ವರ್ಷಗಳ ಅವಧಿಯಲ್ಲಿ ಬೇರೆ ಬೇರೆ ಕಾಲಕ್ಕೆ ಪ್ರಕಟಿತವಾದ ಅವರ ಕಥಾಸಂಗ್ರಹಗಳೊಳಗಿಂದ ಆರಿಸಲಾಗಿದೆ ಅವರ ಬಹುಸಂಖ್ಯಾಕವಾದ ಕತೆಗಳೂ ಅವುಗಳ ರಚನೆಯಲ್ಲಿ ಕಂಡುಬರುವ ಒಂದು ಸ್ವಕೀಯ

ವಾದ ಬಗೆಯೂ, ಅವರಿಗೆ ಇಂದಿನ ಮರಾಟಿ ಸಾಹಿತ್ಯದಲ್ಲಿ ಒಂದು ವಿಶಿಷ್ಟವಾದ ವ್ಯಕ್ತಿತ್ವವನ್ನು ಕಲ್ಪಿಸಿ ಕೊಟ್ಟಿವೆ. ಈ ಚಿಕ್ಕ ಹೊತ್ತಿಗೆಯಲ್ಲಿ ಅವರು ಬರೆಯುತ್ತಿರುವ ಕಥೆಗಳ ಎಲ್ಲ ಬಗೆಗಳು ಸಂಗ್ರಹಿತವಾಗಿವೆಯೆಂದು ಹೇಳಬಹುದಾದರೂ ಅವರ ಪ್ರತಿಯೊಂದು ಕಥೆಯಲ್ಲಿ ಅವರದೇ ಎಂದು ಹೇಳಬಹುದಾದ, ಸಾಮಾನ್ಯವಾಗಿ ಸಣ್ಣ ಕತೆಗಳೆಂದು ಕರೆಯಲ್ಪಡುವ ಕೃತಿಗಳಿಂದ ಅದನ್ನು ಲೇಖಕರ ವೈಶಿಷ್ಟ್ಯದ ಮೂಲಕ ವಿಂಗಡಿಸಬಹುದಾದ ಒಂದು ಆತ್ಮೀಯತೆಯಿರುತ್ತದೆ. ವಿಷಯವನ್ನು ಪ್ರವೇಶಿಸುವ, ವಿವೇಚಿಸುವ ರೀತಿಗಳು ಹೊಸತಾಗಿರುತ್ತವೆ. ಸರ್ವಸಾಧಾರಣವಾಗಿ ಸಣ್ಣ ಕಥೆಬರೆಯುವ ರೀತಿ ಪದ್ಧತಿಗಳಿಂದ ಬೇರೆಯಾಗಿವೆ.

ಸಾಮಾನ್ಯವಾಗಿ ಸಣ್ಣ ಕತೆಗಳ ಕಟ್ಟುವಿಕೆಯನ್ನು ಪರಿಶೀಲಿಸಿದರೆ ಅವರಲ್ಲಿಯೂ ಕಾದಂಬರಿಯಲ್ಲಿದ್ದಂತೆ ಕಥಾರಚನೆ, ಪಾತ್ರರಚನೆ, ಸ್ಥಳಕಾಲ ವರ್ಣನೆಗಳೆಂಬ ಮೂರು ಅಂಗಗಳನ್ನು ಕಾಣಬಹುದು. ಪ್ರತಿಯೊಂದು ಕಥೆಯಲ್ಲಿಯೂ ಈ ಮೂರರಲ್ಲಿ ಯಾವದಾದರೊಂದಕ್ಕೆ ಪ್ರಾಮುಖ್ಯತೆಯಿರುತ್ತದೆ. ಒಂದು ಕಥೆಯಲ್ಲಿ ಅಚ್ಚುಕಟ್ಟಾದ ಕಥಾರಚನೆ, ಬೇರೆಬೇರೆ ರೀತಿಗಳನ್ನು ಸಂಗ್ರಹಿಸುವ ರೀತಿ ಒಳ್ಳೇ ಕೌಶಲ್ಯದಿಂದ ಸಾಧಿಸಿದ್ದರೆ ಇನ್ನೊಂದರಲ್ಲಿ ವಿಶೇಷವಾಗಿ ಎದ್ದುಕಾಣುವ ವ್ಯಕ್ತಿಯನ್ನು ಚಿತ್ರಿಸುವ ಬಗೆಯಿರುತ್ತದೆ. ಇವೆರಡೂ ಇಲ್ಲವಾದರೆ ಮನವನ್ನು ಹಿಡಿದು ನಿಲ್ಲಿಸುವ ಸ್ಥಳ ಕಾಲಗಳ ವರ್ಣನೆಯಾದರೂ ಇರುವದುಂಟು. ಆದರೆ ಈ ಎಂಟು ಕಥೆಗಳಲ್ಲಿ ಯಾವದನ್ನು ನೋಡಿದರೂ ಅದರಲ್ಲಿ ಹೀಗೆ ಮೂರರಲ್ಲೊಂದಕ್ಕೆ ವಿಶೇಷ ಪ್ರಾಧಾನ್ಯವನ್ನು ಕೊಟ್ಟದ್ದು ಕಂಡುಬರುವದಿಲ್ಲ. ಅವಶ್ಯವಿದ್ದ ಮಟ್ಟಿಗೆ ಈ ಮೂರೂ ಅಂಗಗಳ ಸಮಾವೇಶವಾಗಿದೆ. ಯಾಕಂದರೆ ಈ ಮೂರೂ ಅಂಗಗಳಿಲ್ಲದೆ ಕಥೆಯೇ ಹುಟ್ಟಲಾರದು. ಆದರೆ ತುಸು ಸೂಕ್ಷ್ಮವಾಗಿ ಪರೀಕ್ಷಿಸಿ ನೋಡಿದರೆ, ಈ ಕಥೆಗಳನ್ನು ಓದಿ ಮುಗಿಸಿದ ಕೂಡಲೆ ಮನಸ್ಸಿನಲ್ಲಿ ನಿಲ್ಲುವದು, ಒಂದು ಸ್ಪಷ್ಟಚಿತ್ರಿತ ಪಾತ್ರವಲ್ಲ. ತೊಡಕಾಗಿ ಮನರಂಜಿಸುವ ಕಥಾರಚನೆಯಲ್ಲ ಸತ್ಯತೆಯಿಂದಲೂ ಸೂಕ್ಷ್ಮತೆಯಿಂದೂ ಬೆರಗುಗೊಳಿಸುವ ಸ್ಥಳಕಾಲ್ಲವರ್ಣನೆಗಳೂ

ಅಲ್ಲ ಪ್ರತಿಯೊಂದಕ್ಕೂ ಒಂದು ಏಕತೆಯನ್ನು-ಆತ್ಮೀಯತೆಯನ್ನು ಕೊಡುವ ಅಂಗವೊಂದು ಬೇರೆಯದೇ ಆಗಿದೆ. ಹೊಸತಾಗಿದೆ. ಸಣ್ಣ ಕತೆಗೆ ಅವಶ್ಯವಾದ ಏಕತೆಯ ಸಾಧನವು ಶ್ರೀ. ಖಾಂಡೇಕರರಲ್ಲಿ, ಪ್ರಮುಖವಾದ ಪಾತ್ರವಾಗಲಿ, ಪಾತ್ರಗಳನ್ನು ಕುಣಿಸುವ ಕಥಾ ರಚನೆಯಾಗಲಿ, ಇವೆರಡನ್ನು ಹಿಂದಿರಿಸಿ ಒಡೆದುತೋರುವ ಸ್ಥಳ ಕಾಲವರ್ಣನೆಯಾಗಲಿ ಆಗಿರದೆ ಅದೊಂದು ಪ್ರತಿಯೊಂದು ಕಥೆಯ ಪಾರ್ಶ್ವಭೂಮಿಯಲ್ಲಿ ಕಂಡು ಬರುವ ಮೂಲಭೂತ ಅರ್ಥವಾಗಿರುತ್ತದೆ. ಪ್ರತಿದಿನವೂ ಕಾಣುವ ಕೆಲವು ಸಂಗತಿಗಳನ್ನು ಒಂದು ವಿಶಿಷ್ಟ ದೃಷ್ಟಿಕೋನದಿಂದ ನೋಡುವದರಿಂದ ಅವುಗಳಲ್ಲಿ ಕಂಡುಬರುವ ಒಂದು ಅರ್ಥವೇ ಈ ಸಂಗತಿಗಳಿಗೊಂದು ಏಕತೆಯನ್ನು ಕೊಡುತ್ತದೆ. ಸುಪ್ರಸಿದ್ಧ ಅಮೇರಿಕನ್ ಕತೆಗಾರರಾದ ಎಡ್‌ಗರ ಅಲೆನ್ ಪೋರವರು ಸಣ್ಣಕಥೆಯ ಉಗಮವನ್ನು ಹೀಗೆ ಹೇಳುತ್ತಾರೆ. "ಕುಶಲನಾದ ಸಾಹಿತಿಯು ಯಾವದಾದರೊಂದು ವಿಚಾರವನ್ನು, ಒಂದು ಉದ್ದಿಷ್ಟಪರಿಣಾಮವನ್ನು ಕಲ್ಪಿಸಿ ಅದರ ಪೋಷಣೆಗೆ ಬೇಕಾಗುವ ಸಂಗತಿಗಳನ್ನು ಕಲ್ಪಿಸುತ್ತಾನೆ ಆ ಸಂಗತಿಗಳ ಒಂದು ಮಾಲಿಕೆಯನ್ನು ಹೆಣೆಯುತ್ತಾನೆ." ಆದರೆ ಖಾಂಡೇಕರರ ಕಥೆಗಳ ಉಗಮವು ಇಲ್ಲಿ ವರ್ಣಿತವಾದ ಕ್ರಮದ ವಿರುದ್ಧವಾಗಿದೆಯೆಂದು ನನಗನಿಸುತ್ತದೆ. ಅವರು ಕೃತ್ರಿಮ ಸನ್ನಿವೇಶಗಳನ್ನು ಎಳೆದಾಡಿ ತಮ್ಮ ಉದ್ದೇಶವನ್ನು ಸಾಧಿಸುವದಿಲ್ಲ. ಮೊದಲೇ ಕಲ್ಪಿಸಿಕೊಂಡ ಒಂದು ಪರಿಣಾಮವನ್ನುಂಟು ಮಾಡುವ ಹೇತುವಿನಿಂದ ಸಂಗತಿ ಸಂಭಾಷಣೆಗಳಲ್ಲಿ ಕಲ್ಪಿಸಿ ಅಸ್ವಾಭಾವಿಕವಾದ ಮಾಲಿಕೆಯೊಂದನ್ನು ನಿರ್ಮಾಣ ಮಾಡುವದಿಲ್ಲ ಅವರ ಯಾವ ಕಥೆಯನ್ನೋದಿದರೂ ಅದರಲ್ಲಿ ಕುಶಲತೆಯಿಂದ ಹೆಣೆದ ಕೃತ್ರಿಮ ಸನ್ನಿವೇಶಗಳ ಮಾಲಿಕೆಯು ಕಂಡು ಬರುವದಿಲ್ಲ ಅವರ ಕಥೆಗಳಲ್ಲಿ ಕಥೆಯೆಂದು ಹೇಳಿಕೊಳ್ಳುವಂಥ ಕಥೆಯೇ ಇರುವದಿಲ್ಲ. ಇದ್ದರೂ ಅದರಲ್ಲಿಯ ಸಂಗತಿಗಳು ಪ್ರಪಂಚದಲ್ಲಿ ದಿನದಿನಕ್ಕೂ ಕಂಡು ಬರುವ ಕೈಗೆಬಂದ ನಾಲ್ಕು ಸುಖಸಮಾಧಾನಗಳನ್ನೂ, ಕಷ್ಟನಿಷ್ಠುರಗಳನ್ನೂ ಹೇಳುವ ಪ್ರಸಂಗಗಳನ್ನು ಎತ್ತಿಟ್ಟಂತಿರುತ್ತವೆ. ಅವಕ್ಕೆ ಏಕತೆ

ಯನ್ನು ಕೊಡುವ ಸಾಧನವೆಂದರೆ ಲೇಖಕನು ಅವುಗಳಲ್ಲಿ ಕಂಡ ಅರ್ಥ ವಿವೇಚನೆಯೊಂದೇ ಒಂದು ಪಾತ್ರದ ಸೂಕ್ಷ್ಮ ಲೇಖನದ ಕಡೆಗೆ ಈ ಕತೆ ಗಾರರ ಲಕ್ಷ್ಯವಿಲ್ಲ ಯಾಕಂದರೆ ಈ ಕತೆಗಳಲ್ಲಿ ಯಾವದರಲ್ಲಿಯೂ ಇಡೀ ಕಥೆಯನ್ನು ಬದಿಗೊತ್ತಿ ತಾನೇ ತಾನಾಗಿ ಮನಸ್ಸಿನೆದುರಿಗೆ ನಿಲ್ಲುವ ಪಾತ್ರ ವಿಲ್ಲ. ಅಂಗಾಂಗಳನ್ನು ಉಲ್ಲೇಖಿಸಿ ಬರೆದ ಸುದೀರ್ಘವಾದ ಸ್ಥಳ ಕಾಲ ವರ್ಣನೆಗಳಿಲ್ಲ ಸಾಮಾನ್ಯವಾಗಿ ಇವರ ಎಲ್ಲ ಕಥೆಗಳಲ್ಲಿಯೂ ಸ್ಥಾನನಿರ್ದೇಶವಿದ್ದರೂ ಅದಕ್ಕಾಗಿ ವಿಶೇಷ ಶ್ರಮಪಟ್ಟದ್ದು ಕಂಡು ಬರುವದಿಲ್ಲ. ಇವರ ಪಾತ್ರಗಳು ಸಾಮಾನ್ಯ ವ್ಯಕ್ತಿಗಳು ಎಲ್ಲಿಯೂ ಕಾಣಬಹುದಾದಂಥ ಮನುಷ್ಯರಿರುತ್ತಾರೆ; ಕಥೆಗಳೆಂದರೆ ಜೀವ ನದಿಂದ ಎತ್ತಿ ತೆಗೆದ ನಾಲ್ಕು ಸಂಗತಿಗಳು; ಅವಕ್ಕೊಂದು ವಿಶಿಷ್ಟರಚ ನೆಯನ್ನು ಕೊಡಲಿಕ್ಕೆ ತೀರ ಸ್ವಲ್ಪ ಯತ್ನವಿದ್ದರೆ ಇರಬಹುದು. ಇಲ್ಲದಿದ್ದರೆ ಇಲ್ಲ. ಸನ್ನಿವೇಶವನ್ನು ನೋಡಿದರೆ ಅವರಲ್ಲಿ ಜೀವನದಲ್ಲಿ ಅಂದವಾದದ್ದು ಅಂದವಿಲ್ಲದ್ದು ಎಲ್ಲವನ್ನು ಒಂದೂ ಬಿಡದೆ ಹೇಳಿಬಿಟ್ಟದ್ದು ಕಾಣುತ್ತದೆ. ಹೀಗೆ ಈ ಮೂರು ಮಹತ್ವವಾದ ಅಂಗಗಳೂ ಸಾಮಾ ನ್ಯವಾದವುಗಳೂ ವೈಶಿಷ್ಟ್ಯವಿಲ್ಲದವೂ ಆಗಿದ್ದರೂ ಕಥೆಗಳು ಮಾತ್ರ ವೈಶಿಷ್ಟ್ಯ ಪೂರ್ಣವಾಗಿವೆ. ಮನೋರಂಜಕವಾಗಿವೆ ಮನೋವೇಧಕವಾಗಿ ಅರ್ಥಪೂರ್ಣವಾಗಿವೆ. ಅಂದ ಮೇಲೆ ಈ ಕತೆಗಾರರ ಕಲೆಯಗುಟ್ಟು, ಏನಿ ರಬೇಕು? ಇಂದಿನ ಸಾಹಿತಿಗಳಲ್ಲಿ ಕತೆಗಾರರೆನಿಸುವ ಬಹುಜನರಿಗೂ ಇವ ರಿಗೂ ಅಂತರವೆಲ್ಲಿದೆ?

ಈ ಪ್ರಶ್ನೆಗೆ ಉತ್ತರವೆಂದರೆ ಈ ಮೊದಲೇ ಸೂಚಿಸಿದಂತೆ ಇವರ ಕಥೆಗಳಲ್ಲಿಯ ಅರ್ಥವಿವೇಚನೆಯ ಏಕತೆ. ಪಾತ್ರ, ಕಥೆ, ಸ್ಥಳ, ಕಾಲ ಗಳು ಬೇಕಾದಷ್ಟು ಮಟ್ಟಿಗಿದ್ದು ಅವನ್ನು ಈ ಅರ್ಥವಿವೇಚನೆಯು ಸಮ ರಸವಾಗಿ ಕೂಡಿಸುತ್ತದೆ. ಪಾತ್ರಗಳೂ ಸಂಗತಿಗಳೂ ಈ ವಿವೇಚನೆ ಯನ್ನು ಸರಿಯಾಗಿ ಎತ್ತಿ ಹಿಡಿದು ಆ ಇಡೀ ಕೃತಿಯು ಒಂದು ಒಳ್ಳೇ ಪ್ರಚೋದಕವಾದ ಲಘುಕಥೆಯಾಗಲಿಕ್ಕೆ ಸಹಕಾರಿಗಳಾಗುತ್ತವೆ. ಕಣ್ಣಿಗೆ ಕಂಡ ಒಂದು ಸಂಗತಿಯನ್ನು ಯಾವದನ್ನೂ ಬಿಡದೆ ಎತ್ತಿಕೊಂಡು

ಅದರಲ್ಲಿ ತಾವು ಕಂಡ ಅರ್ಥವನ್ನು ವಿವೇಚಿಸಹತ್ತುತ್ತಾರೆ. ಇವರ ಕತೆಗಳಲ್ಲಿದ್ದ ಮನಹಿಡಿಯುವ ಶಕ್ತಿಯು ಈ ವಿವೇಚನೆಯಲ್ಲಿಯೇ ಇದೆಯಲ್ಲದೆ ವಿಶಿಷ್ಟ ಸನ್ನಿವೇಶಗಳಲ್ಲಿ ವಿಶಿಷ್ಟ ವ್ಯಕ್ತಿಗಳು ಮಾಡುವ ಕೃತಿಗಳಲ್ಲಿಲ್ಲ. ಸಾಮಾನ್ಯ ಸನ್ನಿವೇಶಗಳಲ್ಲಿ ಸಾಮಾನ್ಯ ವ್ಯಕ್ತಿಗಳ, ಸಾಮಾನ್ಯ ಕೃತಿಗಳ ಮೇಲೆ ಈ ಲೇಖಕರ ವ್ಯಕ್ತಿತ್ವಪೂರ್ಣವಾದ ದೃಷ್ಟಿಕೋನದಿಂದ ಕಂಡ ಅರ್ಥದ ವಿವೇಚನೆಯು ಇವುಗಳಲ್ಲಿರುತ್ತದೆ. ಪಾತ್ರಗಳೂ ಸನ್ನಿವೇಶಗಳೂ ಆಯಾ ಸನ್ನಿವೇಶಗಳಲ್ಲಿ ಆಯಾ ಪಾತ್ರಗಳ ಕೃತಿಗಳೂ ಇಲ್ಲದೆ ಕಥೆಯೇ ಆಗಲಾರದು. ಆದರೆ ಈ ಪಾತ್ರ-ಕೃತಿ-ಸನ್ನಿವೇಶಗಳು ಇದ್ದಕ್ಕಿದ್ದಂತೆ ಓದುಗರ ಮನಸ್ಸಿಗೆ ಮುಟ್ಟದೆ, ಒಂದು ವಿಶಿಷ್ಟ ದೃಷ್ಟಿಕೋನದಿಂದ ಮಾಡಿದ ಅರ್ಥವಿವೇಚನೆಯ ದ್ವಾರವಾಗಿ ಮುಟ್ಟುತ್ತವೆ. ಈ ವಿವೇಚನೆಯನ್ನು ಕತೆಗಾರರೇ ಹೇಳುತ್ತಿರಬಹುದು. ಇಲ್ಲವೆ ಕತೆಯಲ್ಲಿ ಯಾವದಾದರೊಂದು ಪಾತ್ರದಿಂದ ಹೇಳಿಸುತ್ತಿರಬಹುದು. ಈ ಸಂಗ್ರಹದಲ್ಲಿಯ ಕಡೆಯ ಕಥೆಯ ಉದಾಹರಣೆಯಿಂದ ಈ ವಿಷಯವು ಸ್ಪಷ್ಟವಾಗುವದು. ಅದರಲ್ಲಿ ವರ್ಣಿತವಾದ ಸಂಗತಿಗಳಲ್ಲಿ ವೈಶಿಷ್ಟ್ಯವೇನಿದೆ? ಅದೊಂದು ಸಾಮಾನ್ಯ ಜೀವನದಲ್ಲಿಯ ಒಂದು ಸನ್ನಿವೇಶ. ಆದರೆ ಕತೆಗಾರರು ಪ್ರೊಫೆಸರರ ಮುಖಾಂತರವಾಗಿ ತಮ್ಮ ಅಭಿಪ್ರಾಯಗಳಿಂದ ಸರ್ವಸಾಧಾರಣವಾಗಿಯೇ ಕಂಡುಬರುವ ಸಂಗತಿಗಳಲ್ಲಿಂದಗೂಢವಾದ ಅರ್ಥವೊಂದನ್ನು ಹೊರಡಿಸಿದ್ದಾರೆ. ಅದರಂತೆ “ ಕಲ್ಲಿದೆಯ ಕಂಬನಿಗಳು ” ಕತೆಯಲ್ಲಿ ಪುಷ್ಪೆಯು ಅರಸನ ಬಗ್ಗೆಯೂ ಅವನ ಪರಿವಾರದ ಬಗ್ಗೆಯೂ ಈ ಕತೆಗಾರರಲ್ಲಿದ್ದ ಅಭಿಪ್ರಾಯಗಳನ್ನು ಮಾತಿನಿಂದಲೂ ಕೃತಿಯಿಂದಲೂ ವ್ಯಕ್ತಪಡಿಸುತ್ತಾಳೆ.

ಈ ತರದ ಕಥೆ ಹೇಳುವ ರೀತಿಯ ಉಗಮವನ್ನು ಹುಡುಕುವದೇನೂ ಕಠಿಣವಲ್ಲ. ಒಂದು ಸನ್ನಿವೇಶವಾಗಲೀ ಸಂಗತಿಯಾಗಲೀ ಗ್ರಂಥಕರ್ತನ ಮನಸ್ಸಿಗೆ ಒಂದು ಬಲವಾದ ಸಂಸ್ಕಾರವನ್ನು ಕೊಡುತ್ತದೆ. ಈ ಸಂಸ್ಕಾರವು ಪ್ರಾಮುಖ್ಯವಾಗಿ ಇನ್ನೊಬ್ಬರ ಮನಸ್ಸಿಗೆ ಮುಟ್ಟುವಂತೆ ಅದೇ

ಸನ್ನಿವೇಶವನ್ನಾಗಲೀ ಅಂತಹದೇ ಒಂದು ಸಂಗತಿಯನ್ನಾಗಲಿ ವರ್ಣಿಸ ಲಾಗಿ ಅದೇ ಒಂದು ಕತೆಯಾಗಿ ಪರಿಣಮಿಸಿಬಿಡುತ್ತದೆ. ಕೆಲವು ಸಂಗತಿ ಗಳಿಂದ ಒಂದು ಸಂಸ್ಕಾರವು ಹುಟ್ಟಲು ಆ ಸಂಸ್ಕಾರವು ಇನ್ನೊಬ್ಬರಿಗೆ ಮುಟ್ಟುವಂತೆ ವಿವೇಚಿಸಲು ಅವೇ ಸಂಗತಿಗಳು ಸಹಾಯ ಮಾಡುತ್ತವೆ. ತನ್ನ ಹೆಂಡತಿಯ ಕಣ್ಣುಗಳಲ್ಲಿಯು ನಷ್ಟವಾದ ಸೌಂದರ್ಯವನ್ನು ಮತ್ತೆ ಆವಳ ಕೂಸಿನ ಕಣ್ಣುಗಳಲ್ಲಿ ಕಾಣಬಹುದೆಂಬ ಕಲ್ಪನೆ; ಅಥವಾ ಬಾಹ್ಯ ಸೌಂದರ್ಯವನ್ನು ಕಳೆದುಕೊಂಡಿದ್ದರೂ ಮಾತೃವಾತ್ಸಲ್ಯಪೂರಿತ ವಾದ ಕಣ್ಣುಗಳನ್ನು ಕಾಣುವ ಸಮಾಧಾನ; ಅಥವಾ ಜೀವನದಲ್ಲಿ ಕ್ಷಣಕ್ಷಣದಲ್ಲಿಯೂ ಕಂಡುಬರುವ ತಾರುಣ್ಯ ವಾರ್ಧಕ್ಯಗಳ ನಡುವಿನ ಮಹದಂತರ; ಇವೇ ಆ ಎರಡು ಕತೆಗಳ ಮೂಲಭೂತ ಕಲ್ಪನೆಗಳಾಗಿವೆ. ಒಟ್ಟಿನ ಮೇಲೆ ಒಂದು ಸನ್ನಿವೇಶವನ್ನು ವಿಶಿಷ್ಟ ದೃಷ್ಟಿಕೋನದಿಂದ ನೋಡುವವರಿಂದ ಹೊರಡುವ ಅರ್ಥದ ವಿವೇಚನೆಯೊಂದಿಗೆ ಆ ಸನ್ನಿ ವೇಶದ ನಿರೂಪಣೆಯೇ ಶ್ರೀ ಖಾಂಡೇಕರರ ಕಥೆಯ ನಿಜಸ್ವರೂಪ.

ಈ ಕಥೆಗಳ ರೀತಿಯಲ್ಲಿ ಒಂದು ಮಾತ್ರ ಭಯವಿದೆ. ಸನ್ನಿವೇ ಶವೂ ಅದರಲ್ಲಿ ಕಾಣಲೆಳಿಸಿದ ಅರ್ಥವೂ ಎರಡೂ ಒಂದನ್ನೊಂದು ಪೋಷಿ ಸುತ್ತಿದ್ದು ಎರಡೂ ಸಾಕಷ್ಟು ಮನೋರಂಜಕವಾಗಿದ್ದರೆ ಒಳ್ಳೆಯದು. ಆದರೆ ಸನ್ನಿವೇಶವು ಹೊರಲಾರದಷ್ಟು ಅರ್ಥವು ಭಾರವಾಗಿದೆ. ಆ ಸನ್ನಿ ವೇಶವು ಏನೋ ಒಂದು ನೀತಿಯನ್ನು ಬೋಧಿಸಲಿಕ್ಕೆ ಜೋಡಿಸಿದ ಕೃತ್ರಿಮ ಕಲ್ಪನೆಯಂತೆ ಕಾಣುವಂತಾಗುವದೇನೂ ಅಸಂಭವವಲ್ಲ. "ಚಂದ್ರಕಲೆ" "ಕಲ್ಲೆದೆಯ ಕಂಬನಿಗಳು" "ಕುರುಡನ ಭಾವಬಿದಿಗೆ" ಕಥೆಗಳಲ್ಲಿ ಸನ್ನಿವೇಶಗಳೂ ಅವುಗಳ ಅರ್ಥಗಳೂ ಒಂದಕ್ಕೊಂದು ಸರಿಹೋಗುತ್ತ ವಲ್ಲದೆ ಪರಸ್ಪರ ಪೋಷಣವು ಸರಿಯಾಗಿದೆ. ಅದೇ "ರಾತ್ರಿಯು ದಿವಸ ವಾದರೆ" ಮತ್ತು "ದೃಷ್ಟಿಲಾಭ" ಕಥೆಗಳಲ್ಲಿ ಅರ್ಥವು ಭಾರವಾಗಿ ದ್ದನ್ನು ಕಾಣಬಹುದು.

ಈ ಕತೆ ಹೇಳುವ ರೀತಿಗೆ ಒಂದು ಒಳ್ಳೇ ಪರಿಣಾಮಕಾರಿಯಾದ ಗುಣವನ್ನು ಕೊಡುವ ಒಂದು ವೈಶಿಷ್ಟ್ಯವು ಶ್ರೀ. ಖಾಂಡೇಕರರ ದೃಷ್ಟಿ

ಕೋನದಲ್ಲಿದೆ. ಖಾಂಡೇಕರರ ದೃಷ್ಟಿಯು ಎಲ್ಲೆಲ್ಲಿಯೂ ಪ್ರತಿಯೊಂದು ಸಂಗತಿಯ, ವ್ಯಕ್ತಿಯ, ಸನ್ನಿವೇಶದ, ಎರಡೂ ಕೊನೆಗಳನ್ನು ನೋಡುತ್ತಿರುತ್ತದೆ. "ದೃಷ್ಟಿಲಾಭ" ಕತೆಯು ಕಾವ್ಯಜೀವನದ ಎರಡು ತುದಿಗಳಿಗಿದ್ದ ಎರಡು ವ್ಯಕ್ತಿಗಳನ್ನು ತೋರಿಸುತ್ತದೆ. "ಕಲ್ಲೆದೆಯ ಕಂಬನಿಗಳು" ಕತೆಯು ಮಾನವತೆಯ ಎರಡು ತುದಿಗಳಾಗಿ ನಿಂತಿದ್ದ ಎರಡು ವಕ್ತಿಗಳನ್ನು ತೋರಿಸುತ್ತದೆ. "ಸೇತುವೆ" "ಅವಳ ಕಣ್ಣುಗಳು" ಕತೆಗಳು ಎರಡು ಕೊನೆಗಳಿಗಿದ್ದ ವ್ಯಕ್ತಿಗಳನ್ನು ತೋರಿಸದೆ ಎರಡು ಕೊನೆಗಳಿಗಿದ್ದ ಭಾವನೆಗಳನ್ನು ತೋರಿಸುತ್ತದೆ. "ಎರಡು ಚಿತ್ರಗಳು" ಕತೆಗಳಲ್ಲಿ, ಒಂದೇ ವ್ಯಕ್ತಿಯ ಎರಡು ಕೊನೆಗಳನ್ನು ತೋರಿಸುವದರಿಂದ ಆ ವ್ಯಕ್ತಿಯ ಮೇಲೆ ಬಲವಾದ ಟೀಕೆಯನ್ನು ಸಾಧಿಸಲಾಗದೆ ಕಥೆ ಹೇಳುವ ಈ ವಿಶಿಷ್ಟ ರೀತಿಯು ಅರ್ಥವಿವೇಚನಾ ಪ್ರಧಾನವಾದ ಕಥೆಗಳಿಗೆ ವಿಶೇಷವಾಗಿ ಸರಿಹೋಗುತ್ತದೆ. ಯಾಕಂದರೆ ಎರಡೂ ಕೊನೆಗಳನ್ನು ಎದ್ದು ಕಾಣುವಂತೆ ಒಮ್ಮೆಲೆ ತೋರಿಸುವದರಿಂದ ಇಡಿಯದನ್ನು ಇದ್ದಕ್ಕಿದ್ದಂತೆ ನೋಡುವದು ಸಾಧ್ಯವಾಗುತ್ತದೆ. ಈ ರೀತಿಯಲ್ಲಿ ಮಾಡಿದ ಜೀವನದ ವಿಮರ್ಶೆಯು ಪರಿಣಾಮಕಾರಿಯಾಗಿ ಜನರ ಮನೋಬುದ್ಧಿಗಳನ್ನು ಮುಟ್ಟಬಲ್ಲದು.

"ರಾತ್ರಿಯು ದಿವಸವಾದರೆ" ಕಥೆಯಲ್ಲಿಯ ಬಡ ಸಿಪಾಯಿಯ ಹೆಂಡತಿಗೆ ಅವನ ಜೀವನ ವಿಮೆಯ ಹಣವೇಕೆ ಸಿಗಬಾರದು? ಅಥವಾ "ಚಂದ್ರಕಲೆ"ಯಲ್ಲಿ ಅಂತೂ ನನಗಿದ್ದ ಶಾಲೆ ಕಲಿಯಬೇಕೆಂಬ ವಿಶುದ್ಧವಾದ ಇಚ್ಛೆಯು ವಸಂತನ ತಂದೆಯ ಕುಡುಕತನದಿಂದೇಕೆ ಭಗ್ನವಾಗಬೇಕು? "ದೃಷ್ಯಲಾಭ"ದಲ್ಲಿಯ ಪ್ರೊಫೆಸರರಿಗೂ ಪತ್ರಿಕಾ ಸಂಪಾದಕರಿಗೂ ಬರುವ ಭೇದವೆಲ್ಲಿ? ಈ ಪ್ರಶ್ನೆಗಳ ಉತ್ತರಗಳಲ್ಲಿಯೇ ಶ್ರೀ ಖಾಂಡೆಕರರ ಜೀವನ ವಿಮರ್ಶೆಯ ತತ್ವವಿದೆ. ಆ ತತ್ವವನ್ನು ಸ್ಥೂಲವಾಗಿ ವರ್ಣಿಸುವದಾದರೆ ದೀನದುರ್ಬಲರ ಬಗ್ಗೆ ಇದ್ದ ಸಹಾನುಭೂತಿ, ಎಂದು ಹೇಳಬಹುದು. ಜೀವನವು ಒಂದು ತೊಡಕಾದ ವಿಷಯ ಮನುಷ್ಯನ,

ವರ್ತಮಾನ ಭವಿತವ್ಯಗಳು ಅವನ ಭೂತಕಾಲದಿಂದ ಬದ್ಧವಾಗಿದೆ. ಸಿಪಾಯಿಯ ಹೆಂಡತಿಗೂ ಅಂತೂನನಿಗೂ ಬಂದ ಕಷ್ಟ ನಿಷ್ಠುರಗಳ ಹೊಣೆಯನ್ನು ಯಾವ ಪ್ರಸಂಗದಲ್ಲಿಯೂ, ಯಾವತರದ ವಾದದಿಂದಲೂ, ಅವರ ತಲೆಯ ಮೇಲೆ ಹೊರಿಸುವದು ಶಕ್ಯವಿಲ್ಲ. ಮಾನವ ಸಮುದಾಯವು ಹುಟ್ಟಿದಂದಿನಿಂದ ಇಂದಿನ ವರೆಗೂ ಸಂಪೂರ್ಣವಾಗಿ ನ್ಯಾಯುವರ್ತಿಯಾಗಿಲ್ಲ. ಅದರಲ್ಲಿ ತಲೆತಲಾಂತರಗಳಿಂದ ಜರಗಿದ ತಪ್ಪುಗಳು ಪ್ರತಿಯೊಬ್ಬ ಮನುಷ್ಯನ ಸುತ್ತಲೂ ಒಂದು ವಿಷಮವಾದ ದೈವಬಂಧನವನ್ನು ಹೆಣೆದಿರುತ್ತವೆ. ಇವೆಲ್ಲಕ್ಕೆ ಮೂಲವೆಂದರೆ ಮನುಷ್ಯನ ಡಾಂಭಿಕತೆ. ತನ್ನ ನೆರೆಯವರಲ್ಲಿ ಪ್ರೀತಿಯ ಅಭಾವ. ಪ್ರತಿಯೊಬ್ಬ ಮನುಷ್ಯನೂ ಮಾನವ ಜಾತಿಗೆ ಕೊಡಬೇಕಾಗುವ ಒಂದು ಋಣವಿದೆ. ಅದನ್ನು ತೀರಿಸಲಿಕ್ಕೆ ತನ್ನಂತೆ ಪರರೆಂದು ಬಗೆಯುವದೇ ಒಂದು ಹಾದಿ ಒಬ್ಬನಿಗೆ ಬೇಕಾದ ಸುಖವು ಎಲ್ಲರಿಗೂ ಬೇಕು. ಎಲ್ಲರಿಗೂ ಆ ಸುಖ ಸಿಗಬೇಕೆಂದು ತಿಳಿದು ಅದರಂತೆ ವರ್ತಿಸುವದು ಪ್ರತಿಯೊಬ್ಬನ ಪ್ರಥಮ ಕರ್ತವ್ಯ. "ದೃಷ್ಟಿಲಾಭ" ಕತೆಯ ಕೊನೆಯಲ್ಲಿ ಹೇಳಿದ್ದು ಇದೇ. ಆ ಕುಂಟನಾಯಿ, ಆ ಬಿಕ್ಷುಕರ ಹುಡುಗಿಯಿಂದ ಮೊದಲು ಮಾಡಿ ಪ್ರತಿಯೊಬ್ಬ ಮನುಷ್ಯನ, ಇಡೀ ಮಾನವಕೋಟಿಯ ಒಂದು ಆಸೆಯೆಂದರೆ ತನ್ನ ಕೈಗೆ ಸಿಕ್ಕಷ್ಟು ತಾನು ಕಂಡಷ್ಟು ಸುಖವನ್ನು ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬದು.

ಇನ್ನು ಹೇಳಬೇಕಾಗಿ ಉಳಿದ ಒಂದೇ ಮಾತೆಂದರೆ ಈ ಕಥೆಗಳನ್ನು ಭಾಷಾಂತರಿಸುವದರಲ್ಲಿ ಉಪಯೋಗಿಸಲ್ಪಟ್ಟ ಭಾಷೆಯ ಬಗ್ಗೆ. ಸ್ವಭಾವತ: ನನ್ನ ಒಲವು ಉದಾರಮತಗಳ ಕಡೆಗಿರುವದರಿಂದ ನನಗೆ ಇಲ್ಲಿ ಪ್ರಯೋಗಿಸಲ್ಪಟ್ಟ ಭಾಷೆಯ ವಿಷಯದಲ್ಲಿಯಾದರೂ, ಗಡುಚಾದ ಅಲಂಕಾರಿಕ ಭಾಷೆಗೇ ಗ್ರಂಥಸ್ಥ ಭಾಷೆಯೆನ್ನುವ ಪುರಾಣ ಮತವಾದಿಗಳೊಡನೆ ಒಪ್ಪುವದು ಶಕ್ಯವಾಗಿಲ್ಲ. ಅದಲ್ಲದೆ ಈ ನಮ್ಮ ಹಳೆಯ ತರದ ಅಲಂಕಾರಿಕ ಗ್ರಂಥಸ್ಥ ಭಾಷೆಯ ವಿಷಯದಲ್ಲಿ ಕನ್ನಡಕ್ಕೆ ಈ ಮೊದಲೇ ಕುಪ್ರಸಿದ್ಧಿ ಇದ್ದರೂ ನಾನು ಎಲ್ಲ ಕಟ್ಟು ಕಟ್ಟಳೆಗಳನ್ನು

ತೆಗೆದೊಗೆದು ಕೈಗೆ ಬಂದಂತೆ ಬರೆಯಬೇಕೆಂಬ ನವಮತವಾದಿಗಳ ಕೂಡ ವಾದರೂ ಒಪ್ಪಲಾರೆ. ಆದ್ದರಿಂದ ನಾನು ಜನರಾಡುವ ಮಾತಿಗೆ ದೂರ ವಾಗಿರದೆ, ಗ್ರಂಥಸ್ಥ ಭಾಷೆಗೆ ಅವಶ್ಯವೆನಿಸಿದ ಕೆಲವಾದರೂ ಕಟ್ಟುಗ ಳುಳ್ಳ ಒಂದು ಮಧ್ಯಮಾರ್ಗವನ್ನು ಕಲ್ಪಿಸಿಕೊಳ್ಳಲಿಕ್ಕೆ ಯತ್ನಿಸಿದ್ದೇನೆ. ಈ ವಿಷಯದಲ್ಲಿ ಮತವ್ಯತ್ಯಾಸವು ಬಹಳವಾಗಿದ್ದರೂ, ಶ್ರೀ. ಜೋಶಿಯ ವರು ತಮ್ಮ "ಕನ್ನಡ ನುಡಿಯ ಹುಟ್ಟು" ಎಂಬ ಪುಸ್ತಕದಲ್ಲಿ ಹೇಳಿದಂತೆ ಭಾಷೆಯು ತನ್ನ ಕಾರ್ಯವನ್ನು ಮಾಡಬೇಕಾದರೆ ಆದರಲ್ಲೊಂದು, ದಿನ ದಿನವು ಬದಲಿಸುತ್ತಿರುವ ಪ್ರಪಂಚದ ಎಲ್ಲ ಅವ ಶ್ಯಕತೆಗಳನ್ನು ಪೂರೈಸಬಹುದಾದ ಸುಖನಮ್ಯತೆ ಇರಬೇಕೆಂದು ನನಗೆ ಅನಿಸುತ್ತದೆ. ಈಗ ಕೈಕೊಂಡ ಪ್ರಯತ್ನವು ಸ್ವಲ್ಪ ಮಟ್ಟಿಗಾದರೂ ಮೇಲೆ ಹೇಳಿದ ದೃಷ್ಟಿಕೋನಕ್ಕೊಂದು ದೃಷ್ಟಾಂತವಾಗಬಹುದೆಂದು ಆಶಿಸುತ್ತೇನೆ.

ತಮ್ಮ ಕಥೆಗಳನ್ನು ಭಾಷಾಂತರಿಸಲಿಕ್ಕೆ ಸಮ್ಮತಿಯನ್ನಿತ್ತು ನನ್ನ ಮೇಲೆ ಮಹದುಪಕಾರ ಮಾಡಿದ ಶ್ರೀ. ಖಾಂಡೇಕರರವರಿಗೆ ನಾನು ಬಹು ವಾಗಿ ಋಣಿಯಾಗಿದ್ದೇನೆ ಅವರ ಔದಾರ್ಯವು ಮೊದಲಿನಿಂದ ಕೊನೆ ಯವರೆಗೆ ನನ್ನ ಪ್ರಯತ್ನದಲ್ಲಿ ನನಗೆ ಪ್ರೋತ್ಸಾಹವನ್ನಿತ್ತು ಅದನ್ನು ಪೂರ್ತಿಗೊಳಿಸುವದನ್ನು ಸಾಧ್ಯಮಾಡಿದೆ. ಈ ಪ್ರಯತ್ನದಲ್ಲಿ ನನ್ನೊಡನೆ ಸಹಕರಿಸಿ, ಮುದ್ರಣ ಕಾರ್ಯವನ್ನು ತೀವ್ರ ಮುಗಿಸಿಕೊಟ್ಟು ಈ ಪುಸ್ತ ಕವನ್ನು ಪ್ರಸಿದ್ಧಿಸಲಿಕ್ಕೆ ಸಹಾಯಮಾಡಿದ ಶ್ರೀ. ವೆಂಕಟರಾವ ನಾಯಕ ರವರಿಗಾದರೂ ನಾನು ಋಣಿ. ಶ್ರೀ. ಖಾಂಡೇಕರರ ಕಥೆಗಳಲ್ಲಿ ನಾವು ಕಲಿಯಬೇಕಾದುದೂ, ವಿಚಾರಮಾಡಬೇಕಾದುದೂ, ಸ್ಪರ್ಧಿಸಬೇಕಾದುದೂ ಬಹಳವಿದೆಯೆಂದು ನಾನು ದೃಢವಾಗಿ ನಂಬಿದ್ದೇನೆ. ಇಂಥ ಕಥೆಗಳ ಭಾಷಾಂತರಗಳ ಈ ಚಿಕ್ಕ ಸಂಗ್ರಹದಲ್ಲಿ ಸಹೃದಯರಾದ ಕನ್ನಡಿಗರು ಸ್ವಲ್ಪವಾದರೂ ಹೊಸದನ್ನೇನಾದರೂ ಕಂಡರೆ ನನ್ನ ಪ್ರಯತ್ನವು ಸಫ ಲವಾಯಿತೆಂದು ಬಗೆಯುತ್ತೇನೆ.

ಡಿಸ್ಟ್ರಿಕ್ಟ ಕೋರ್ಟ, ವಿಜಾಪೂರ.
ತಾ|| ೨೨-೮-೧೯೩೭. } **ವೆಂಕಟರಾವ ಇನಾಮದಾರ.**

# ಎರಡು ಚಿತ್ರಗಳು.

ಆ ಎರಡು ಚಿತ್ರಗಳಲ್ಲಿ ಹೆಚ್ಚು ಆಕರ್ಷಕವಾದದ್ದು ಯಾವದು ಎಂಬುದನ್ನು ಹೇಳಲಿಕ್ಕೆ ಎಷ್ಟೋ ರಸಿಕರಿಗೆ ಕೂಡ ಆಗಲಿಲ್ಲ. ಅಂದ ಬಳಿಕ ಸಾಮಾನ್ಯ ಪ್ರೇಕ್ಷಕಗಣದ ಗತಿಯೇನು? ಒಬ್ಬ ರಸಿಕ ತರುಣನಂತೂ ಆ ಎರಡೂ ಚಿತ್ರಗಳನ್ನು ನೋಡಿ ಉದ್ಗಾರ ತೆಗೆದ "ಪ್ರೇಯಸಿಯ ಕಪೋಲಗಳಲ್ಲಿ ಎಡಬಲ ಹೇಳುವದಾದರೂ ಹೇಗೆ?" ಎಂದು.

ಹಾಗೆ ನೋಡಿದರೆ ಆ ಚಿತ್ರಗಳಲ್ಲಿ ಸಾಮ್ಯಕ್ಕಿಂತಲೂ ವಿರೋಧವೇ ಹೆಚ್ಚಾಗಿತ್ತು. ಒಂದರ ಹೆಸರು "ಸ್ವಪ್ನ" ವಾದರೆ ಇನ್ನೊಂದರ ಹೆಸರು 'ಜಾಗೃತಿ' ! "ಸ್ವಪ್ನ"ದಲ್ಲಿ ಒಬ್ಬ ೧೭-೧೮ ವರುಷದ ತರುಣಿಯೊಬ್ಬಳು ಚಿತ್ರಿಸಲ್ಪಟ್ಟಿದ್ದಳು. ನಿದ್ರೆಯಲ್ಲಿ ಅವಳ ಸೆರಗು ಬದಿಗೆ ಸರಿದದ್ದನ್ನು ಚಿತ್ರಕಾರನು ತೋರಿಸಿದ್ದ. ಸ್ವಪ್ನದಲ್ಲಿ ಕಂಡ ಪ್ರಿಯಕರನನ್ನು ಕಾಣುವ ಕುರಿತು ಅವಳು ಕಣ್ಣು ತೆರೆಯುವಷ್ಟರಲ್ಲಿ ಅವಳಿಗೆ ಎದುರಿನಲ್ಲಿ ಯಾರೂ ಕಾಣುವದಿಲ್ಲ. ಸ್ವಪ್ನದಲ್ಲಿಯ ಪ್ರಿಯಕರನ ಮಸುಕಾದ ಮೂರ್ತಿಯನ್ನು ಮೋಹಕವಾಗಿ ಚಿತ್ರಿಸುವದರಲ್ಲಿ ಚಿತ್ರಕಾರನು ತೋರಿಸಿದ ಕೌಶಲ್ಯವು ಅವಳ ಸರಿದ ಸೆರಗನ್ನು ಚಿತ್ರಿಸುವದರಲ್ಲಿಯೂ ಕಂಡು ಬರುತ್ತಿತ್ತು.

'ಜಾಗೃತಿ' ಯಲ್ಲಿಯ ಸ್ತ್ರೀಯ ಸೆರಗಾದರೂ ಸರಿದದ್ದೇ ಇತ್ತು. ಆದರೆ ಅವಳು ವಯಸ್ಸಿನಿಂದ ಪ್ರೌಢೆ. ಅಂದರೆ ಸುಮಾರು ೨೫ ವರುಷದವಳಿರಬಹುದು. ಅವಳ ೭-೮ ತಿಂಗಳ ಮುದ್ದು ಮಗುವು ಅದೇ ಎಚ್ಚತ್ತರಾಗಿ ಆನಂದದಿಂದ ತಾಯಿಯ ಸೆರಗಿನ ಕೂಡ ಆಡುತ್ತ, ನಡುನಡುವೆ ಅವಳ ಕಡೆಗೆ ಪ್ರೀತಿಯಿಂದ ನೋಡುತ್ತ, ಆ ಮುದ್ದು ಮಗುವಿನ ಸ್ತನಪಾನ ನಡೆದಂತೆ ಅದರ ದೃಶ್ಯವಿತ್ತು. ಬಾಲಕನ ಮೂರ್ತಿಯೂ ಮತ್ತು ಅವನು ಬದಿಗೆ ಸರಿಸಿದ ತಾಯಿಯ ಸೆರಗಿನ ಚಿತ್ರಿಸುವಿಕೆಯೂ ಆ ಕತೆಗಾರನ ಕೌಶಲ್ಯದ ಸಾಕ್ಷಿಯೂ ಆಗಿದ್ದವು.

ಪ್ರದರ್ಶನವಲ್ಲಿಯ ಚಿತ್ರಗಳಿಗೆ ಸಣ್ಣ ದೊಡ್ಡ ಪಾರಿತೋಷಕಗಳು ಇಡಲ್ಪಟ್ಟಿದ್ದವು. ಆದರೆ ಸುವರ್ಣ ಪದಕಗಳು ಎರಡೇ ಇದ್ದವು. ಇಡೀ ಪ್ರದರ್ಶನವನ್ನೇ ಏರ್ಪಡಿಸಿದ ಆರ್ಯಭೂಷಣ ಸರದಾರ ಇಂಗಳೀಯವರು ಇಟ್ಟದ್ದು ಒಂದು, ಇನ್ನೊಂದು ಜನರಿಂದ ಕೊಡಲ್ಪಟ್ಟ ಹಣದೊಳಗಿಂದ ಇಟ್ಟದ್ದು. ಪ್ರತಿಯೊಬ್ಬ ಚಿತ್ರಕಾರನು ತನ್ನ ಹೆಸರನ್ನು ಮೋಹರು ಮಾಡಿದ ಪಾಕೀಟಿನಲ್ಲಿ ಬರೆದು, ಅದರ ಮೇಲೆ ತನ್ನ ಚಿತ್ರದ ಹೆಸರು ಬರೆದಿದ್ದ, ಆದ್ದರಿಂದ ನಿರ್ಣಯದ ವಿಷಯದಲ್ಲಿ ಪಕ್ಷಪಾತವಾಗುವ ಸಂಭವವೇನೂ ಇರಲಿಲ್ಲ. “ಜಿಟಾಪಿಶಿಯಮ್, ಬೋಲಶೇವಿಜಮ್‌ಗಳ ವರೆಗೂ ಎಲ್ಲ ವಿಷಯಗಳ ಜ್ಞಾನವು ವೃದ್ಧ ಸರದಾರ ಸಾಹೇಬರಿಗೆ ಇದ್ದಮೂಲಕ ಅವರು ತಮ್ಮ ಪದಕದ ಸಲುವಾಗಿ ಯಾವ ಚಿತ್ರವನ್ನು ಆರಿಸುವರೆಂಬ ವಿಷಯದಲ್ಲಿ ಜನರಿಗೆ ಕುತೂಹಲವಾದಂತೆ, ಜನಸಾಮಾನ್ಯದ ಅಭಿರುಚಿಯು ತಮ್ಮ ಅಭಿರುಚಿಯೊಡನೆ ಎಷ್ಟರಮಟ್ಟಿಗೆ ಸರಿಹೋಗುವದೆಂಬದನ್ನು ನೋಡುವ ವಿಷಯದಲ್ಲಿ ಇಂಗಳೆ ಸರದಾರ ಸಾಹೇಬರಿಗಾದರೂ ಕುತೂಹಲವೆನಿಸುತ್ತಿತ್ತು.

ನಿರ್ಣಯದ ದಿವಸ ಪ್ರೇಕ್ಷಕಗಣವು ಉಪಸ್ಥಿತವಾಯಿತು. ಪ್ರದರ್ಶನಕ್ಕೆ ಚಿತ್ರಗಳನ್ನು ಕೊಟ್ಟ ಕಲಾವಂತರಾದರೂ ಬಂದಿದ್ದರು. ಅಧ್ಯಕ್ಷಸ್ಥಾನವನ್ನು ಅಲಂಕರಿಸುವದು ಸರದಾರ ಸಾಹೇಬರ ಜನ್ಮಸಿದ್ಧ ಹಕ್ಕೇ ಆಗಿತ್ತು. ಆ ತಮ್ಮ ಹಕ್ಕಿನ ವಿಷಯದಲ್ಲಿ ಪ್ರತಿಪಾದನೆಮಾಡಿ, ಅವರು ಚಿತ್ರಕಲೆಯ ವಿಷಯದಲ್ಲಿ ಪ್ರಾಸ್ತಾವಿಕ ಭಾಷಣವನ್ನು ಮುಗಿಸಿದರು. ಪ್ರಾಚೀನ ಕಾಲದಲ್ಲಿ ಚಿತ್ರಕಲೆಯ ಉತ್ಕರ್ಷದ ವಿಷಯವಾಗಿ ಹೇಳುವಾಗ ಅವರು, ರಮಣಿಯರ ಸ್ತನಾಗ್ರದ ಮೇಲೆ ಉಗುರುಗಳಿಂದ ಚಿತ್ರಗಳನ್ನು ತೆಗೆಯುವ ಸಂಸ್ಕೃತ ಕವಿಗಳ ಕಲ್ಪನೆಯ ಉಲ್ಲೇಖವನ್ನಾದರೂ ಮಾಡಿದರು. ಶ್ರೋತೃವರ್ಗವು ಚಪ್ಪಾಳೆಯ ಕಡಕಡಾಟದಿಂದ ಈ ಸೂಕ್ಷ್ಮ ಸಂಶೋಧನೆಯ ಸ್ವಾಗತಮಾಡಿತು.

ಆ ಮೇಲೆ ಸರದಾರ ಸಾಹೇಬರು ತಮ್ಮ ನಿರ್ಣಯವನ್ನು ಜಾಹೀರ

ಪಡಿಸಿದರು. ಅವರ ಮತದಲ್ಲಿ 'ಜಾಗೃತಿ' ಚಿತ್ರವು ಸ್ಪಷ್ಟವಾಗಿ ಉತ್ಕೃಷ್ಟ ವಾಗಿತ್ತು. ತಮ್ಮ ಸುವರ್ಣಪದಕದಂತೆ, ಜನತೆಯ ಸುವರ್ಣಪದಕವಾದರೂ ಅದೇ ಚಿತ್ರಕ್ಕೆ ಸಿಗಬೇಕು ಎಂದು ಅವರು ಒಳ್ಳೇ ಆತ್ಮವಿಶ್ವಾಸದಿಂದ ಹೇಳಿದರು.

ಪ್ರದರ್ಶನದ ವೇಳೆಯಲ್ಲಿ ಪ್ರೇಕ್ಷಕರು ತಮ್ಮ ಮತಗಳನ್ನು ಪ್ರದರ್ಶಿಸುವ ವ್ಯವಸ್ಥೆಯೂ ಮಾಡಲ್ಪಟ್ಟಿತ್ತು. ಮತಗಳ ಎಣಿಸುವಿಕೆಯೂ ಆಯಿತು ಜನರ ದೃಷ್ಟಿಯಿಂದ 'ಸ್ವಪ್ನ' ಚಿತ್ರವು 'ಜಾಗೃತಿ' ಗಿಂತಲೂ ಸರಸವೆಂದು ನಿರ್ಣಯಿಸಲ್ಪಟ್ಟಿತು.

ಸರದಾರ ಇಂಗಳೆಯವರು ಕ್ಷಣಹೊತ್ತು ಬೆಚ್ಚಿದರು. ಆದರೆ ಪಾನಿಪತ ರಣಕ್ಷೇತ್ರದ ಮೇಲೆ ಮಾಡಿದ ವೀರರ ವಂಶಜರೇ ಆಗಿದ್ದರಿಂದ, ಅವರು ಒಮ್ಮೆಲೇ ಪದಕದಾನದ ಸಮಾರಂಭಕ್ಕೆ ಸುರುಮಾಡಿದರು. ಗೀತೆಯಲ್ಲಿಯದೊ ಗರುಡಪುರಾಣದಲ್ಲಿಯದೋ ಯಾವದೋ ಒಂದು ಸಂಸ್ಕೃತ ಶ್ಲೋಕವನ್ನು ಅಂದು, ಅದರ ಅನ್ವಯಾರ್ಥ ಹೇಳಿ, ಅವರು ಮುಂದಕ್ಕೆ ಭಾಷಣಸಾಗಿಸಿದರು. "ಎರಡೂ ಪದಕಗಳು ಒಂದೇ ಚಿತ್ರಕ್ಕೆ ಸಿಕ್ಕಿದ್ದರೆ ಹಾಲಿನಲ್ಲಿ ಸಕ್ಕರೆ ಹಾಕಿದಂತಾಗುತ್ತಿತ್ತು. ಆದರೆ ಸಕ್ಕರೆ ಚಹದಲ್ಲಿಯೇ ಬೀಳಬೇಕೆಂದು ಪ್ರಭುರಾಮಚಂದ್ರನ ಇಚ್ಛೆ ಇತ್ತು. ಈಶ್ವರೇಚ್ಛೆಯ ಮುಂದೆ ಯಾರದೇನು ನಡಿಯಬೇಕು? ಜನಸಾಮಾನ್ಯವು ಬಹುತರವಾಗಿ ತಪ್ಪುತ್ತಿರುವದೆಂದು ಯಾವನೋ ಒಬ್ಬ ಪಾಶ್ಚಾತ್ಯ ಲೇಖಕನು ಹೇಳಿದ್ದಾನೆ. 'ಸೆನ್' ಹೀಗೇನೋ ಹೆಸರು ಅದೆ ಅವನದು. ಗಣನಾಥ ಸೆನ್ ಅಥವಾ— (ಕೂಡಿದ ಜನರೊಳಗಿಂದ ಯಾರೋ ಹೇಳಿದರು "ಇಬ್ಸೆನ್") ಇರಬಹದು, ಅದೂ ಇರಬಹದು. ಪಾಶ್ಚಾತ್ಯ ಲೇಖಕರೊಂದಿಗೆ ಹೆಸರಿಗೆ ಕೂಡ ಸಂಬಂಧವಿಡುವದೂ ಕೂಡ ಘಾತುಕವಾಗಿದೆ. ಒಬ್ಬನು ಹೇಳುವ— ಬೇಕಾದವಳು ಬೇಕಾದವನ ಕೈಹಿಡಿದು ಬೇಕಾದ್ದನ್ನು ಮಾಡಬಹುದು. ಮತ್ತೊಬ್ಬನು ನುಡಿವ— ದೇವರು ದಿಂಡರು ಎಲ್ಲವೂ ಸುಳ್ಳು. ಯುರೋಪದಲ್ಲಿ ಪೇಶವೆಯರು ಇದ್ದರೆ ಇಂಥ ಲೇಖಕರನ್ನು ಆನೆಯ ಕಾಲಿನ

ಬುಡದಲ್ಲಿ ಹಾಕಿ ಬಿಡುತ್ತಿದ್ದರು. ಇಲ್ಲದಿದ್ದರೆ, ಕತ್ತಿಗಳ ಮೇಲೆ ಮೆರವಣಿಗೆಯನ್ನಾದರೂ ತೆಗೆದೇಬಿಡುತ್ತಿದ್ದರು. ಆದರೆ—"

ಸರದಾರ ಸಾಹೇಬರ ಕೂಡ ಶ್ರೋತೃವರ್ಗವಾದರೂ ನಿಟ್ಟುಸಿರು ಬಿಟ್ಟಿತು. ದಾರೀ ತಪ್ಪಿ ಎರಡನೇ ರೂಳಿನ ಮೇಲೆ ಹೋಗುವ ಅವರ ವಕ್ತೃತ್ವದ ಹೊಗೆಬಂಡಿಯು "ಆದರೆ—" ಎಂಬ ಸ್ಟೇಶನ್ನಿಗೆ ಒಮ್ಮೆಲೆ ನಿಂತು ಬಿಡುವದು ಎಂಬ ಮಾತು ಶ್ರೋತೃಗಣಕ್ಕೆ ಅನುಭವಸಿದ್ಧವಾಗಿತ್ತು. ತಮ್ಮ ಶುಭ್ರವಾದ ಮೀಸೆಗಳ ಮೇಲೆ ಕೈಯಾಡಿಸುತ್ತ ಸರದಾರ ಸಾಹೇಬರು ಗರ್ಜಿಸಹತ್ತಿದರು. "ಜಾಗೃತಿ ಚಿತ್ರವು ಸ್ವಪ್ನದ ಚಿತ್ರಕ್ಕಿಂತಲೂ ಒಳ್ಳೆಯದೆಂಬುದನ್ನು ಒಬ್ಬ ಕುರುಬನು ಕೂಡ ಹೇಳಬಹುದಾದ ಮಾತು. ಇಂದು ನಮ್ಮ ದೇಶಕ್ಕೆ ಬೇಕಾದದ್ದೇನು? ಸ್ವಪ್ನವೇ? ಛೀ! ಛೀ! ಸ್ವಪ್ನವಲ್ಲಿಯೂ ಕೂಡ ಹೀಗೆ ಯಾರೂ ಹೇಳಲಿಕ್ಕಿಲ್ಲ. ದೇಶಕ್ಕೆ ಈಗ ಬೇಕಾದದ್ದು ಜಾಗೃತಿ! ಸ್ವಪ್ನಗಳು ಸಾಕಾಗಿಹೋದವು. ಇತ್ತೀಚೆಗೆ ಪಾಶ್ಚಿಮಾತ್ಯ ದೇಶಗಳಲ್ಲಿ ಸ್ವಪ್ನದ ಆಡಂಬರ ಬಹಳ ಬೆಳೆಯಹತ್ತಿದೆ. ಲಾಯಿಡ ಜಾರ್ಜನೋ, ಲಾಯಿಡ ಹ್ಯಾರೋಲ್ಡನೋ—(ಶ್ರೋತೃಗಳೊಳಗಿಂದ ಮತ್ತೆ ಧ್ವನಿ ಬಂದಿತು.—ಫ್ರಾಯಿಡ್) ಇರಬಹುದು, ಇರಬಹುದು, ಯಾರಾದರೂ ಇದ್ದಿರಬಹುದು. ಈ ನವಮತವಾದಿಗಳ ಹೆಸರು ತೆಗೆದುಕೊಳ್ಳುವದು ಕೂಡ ಮಹಾಪಾಪವಾಗಿದೆ.

ತಮ್ಮ ಅಭಿನಯದಿಂದ ಹ್ಯಾಮ್ಲೆಟನ ಎಲ್ಲ ಭೂಮಿಕೆಗಳನ್ನು ಸೂಚಿಸುವಂತೆ ಸರದಾರ ಸಾಹೇಬರು ಮುಂದೆ ಸಾಗಿದರು. "ಈ ಚಿತ್ರನೋಡಿರಿ, ಈ ಚಿತ್ರ ನೋಡಿರಿ. ಇಬ್ಬರು ಚಿತ್ರಕಾರರ ಕೌಶಲ್ಯವನ್ನು ಯಾರಾದರೂ ಒಪ್ಪುವಂತಿದೆ. ಆದರೆ ಒಬ್ಬನದು ಆರ್ಯಹೃದಯ ಮತ್ತು ಒಬ್ಬನದು ಪಾಶ್ಚಿಮಾತ್ಯರ ಜಡವಾದಕ್ಕೆ ಬಲಿಬಿದ್ದವನ ಹೃದಯ "ಜಾಗೃತಿ" ಯು ಆರ್ಯಸಂಸ್ಕೃತಿಯ ಮೂರ್ತಿಮಂತ ಚಿತ್ರವಾಗಿದೆ. ಬಾಲಕನ ಸಲುವಾಗಿ ತಾಯಿಯು ಮಾಡುವ ಸ್ವಾರ್ಥತ್ಯಾಗವನ್ನು ಕಂಡು ಸಗದ್ಗದಿತವಾಗದೆ ಇರುವವರಾರು? ಈ ಚಿತ್ರ ನೋಡಿ ನನಗೆ ಕೂಡ ಸಣ್ಣ ಮಗುವಾಗಬೇಕೆಂ

ದೆನಿಸಿತು. ಇನ್ನು ಈ 'ಸ್ವಪ್ನ' ನೋಡಿರಿ ಇದರಲ್ಲಿ ಏನಾದರೂ ತ್ಯಾಗ ವಿದೆಯೋ. ಕಲೆಯ ಕ್ಷೇತ್ರದಲ್ಲಿ ಸಲ್ಲದ ಮಡಿವೈಲಿಗೆ ಮಾಡುವ ಮನುಷ್ಯನಲ್ಲ ನಾನು. ಆದರೆ ಈ ಸ್ವಪ್ನ ಚಿತ್ರದಲ್ಲಿಯ ತರುಣಿಯ ಸೆರಗನ್ನು ಚಿತ್ರಕಾರನು ಸ್ವಲ್ಪ ವ್ಯವಸ್ಥಿತವಾಗಿ ಇರಿಸಿದ್ದರೆ ಏನು ಕೆಡುತ್ತಿತ್ತು? ಜಾಗೃತಿಯೊಳಗಿನ ಸ್ತ್ರೀಯ ಸೆರಗಾದರೂ ಸರಿದದ್ದೇನೋ ನಿಜ. ಆದರೆ ಅದು ಅವಳ ಮುದ್ದುಮಗುವು ಸ್ತನಪಾನದ ವೇಳೆಯಲ್ಲಿ ಸರಿಸಿದ ಮೂಲಕ ಸ್ವಪ್ನದಲ್ಲಿ ಅಂಥಾದ್ದೇನೂ ಇಲ್ಲ. ಸೆರಗು ಬದಿಗೆ ಸರಿಯಬೇಕಾದರೆ ಕಾರ್ಯಕಾರಣ ಭಾವವೇನಾದರೂ ಬೇಕಲ್ಲವೇ? ( ನಗು ) ನಿಮ್ಮಂಥ ಸೂಜ್ಞರಿಗೆ ಇದಕ್ಕಿಂತಲೂ ಹೆಚ್ಚಿಗೆ ಹೇಳತಕ್ಕದ್ದಾದರೂ ಏನು?

ಬಹುಜನ ಸಮಾಜದ ಅಭಿರುಚಿಯು ಇನ್ನೂ ಸುಸಂಸ್ಕೃತವಾಗಿಲ್ಲವೆಂದೇ ಈ ಸ್ವಪ್ನ ಚಿತ್ರಕ್ಕೆ ಇಂದು ಸುವರ್ಣ ಪದಕದೊರೆತಿದೆ. ಆ ಚಿತ್ರಕ್ಕೆ ಕೊಟ್ಟ ಮತಗಳೆಲ್ಲವೂ ತೀಗೇಡಿ ತರುಣ ತರುಣಿಯರವೇ ಇರಬೇಕು! ಹಾಗೇನೂ ನಾನು ಶೃಂಗಾರಕ್ಕೆ ವಿರೋಧಿಯಾಗಿರುವೆನೆಂತಲ್ಲ. ನನಗೆ ನಾಲ್ಕು ಮದುವೆಗಳಾಗಿದ್ದು, ನನಗೆ ಹದಿನೇಳು ಹುಡುಗರೂ, ಒಂಭತ್ತು ಹೆಣ್ಮಕ್ಕಳು ಇದ್ದ ಸಂಗತಿ ಜಗಜ್ಜಾಹೀರವಿದೆ. ಶೃಂಗಾರವಿದ್ದರೂ ಆರ್ಯಶೃಂಗಾರವಿರಬೇಕು. ಋಷಿ ಮುನಿಗಳ ಈ ಪುಣ್ಯಭೂಮಿಗೆ ಶೋಭಿಸುವಂಥ ಶೃಂಗಾರ ಬೇಕು! ಹುಚ್ಚು ಹುಚ್ಚಿನ ಪಾಶ್ಚಾತ್ಯ ಶೃಂಗಾರವು ನಮಗೆ ಬೇಡ. ಈಗ ವೇಳೆಯೂ ಬಹಳವಾಗುತ್ತ ಬಂದಿತು. ಎಲ್ಲ ಕಲಾವಂತರಿಗೆ ನಮ್ಮ ಆಗ್ರಹದ ಆವ್ಹಾನವೆಂದರೆ, ಅವರೆಲ್ಲರೂ ಈ ಜಾಗೃತಿಚಿತ್ರ ತೆಗೆದ ಚಿತ್ರಕಾರನ ಅನುಕರಣ ಮಾಡಬೇಕು. ಸ್ವಪ್ನವನ್ನು ಚಿತ್ರಿಸಿದವನ ಹೆಜ್ಜೆಯಲ್ಲಿ ಹೆಜ್ಜೆಯನ್ನಿಟ್ಟು ಸಮಾಜವನ್ನು ಅಧೋಗತಿಗೆ "ಒಯ್ಯತಕ್ಕದ್ದಲ್ಲ."

ಭಾಷಣವು ರುಚಿಸಿತೆಂತಾಗಲಿ, ಮುಗಿಯಿತೆಂತಾಗಲಿ ಚಪ್ಪಾಳಿಯು ಪ್ರಚಂಡ ಕಡಕಡಾಟವಾಯಿತು. ಜಾಗೃತಿ ಚಿತ್ರದ ಪಾಕೀಟು ಒಡೆದು ಚಿತ್ರಕಾರನ ಹೆಸರನ್ನು ಪ್ರಕಟಿಸಲಾಯ್ತು. ಯಶಸ್ವಿಯಾದ ಚಿತ್ರಕಾರನ

ಮುಂದೆ ಬಂದ. ವಯಸ್ಸು ಇದೆ ಮೂವತ್ತು ಮೀರಿರಬಹುದು. ಗೌರ ವರ್ಣದ, ತೆಳ್ಳನ ಮೈಕಟ್ಟು. ಮುಖದಲ್ಲಿ ಮಧುರಸ್ಮಿತ. ವೃದ್ಧ ಸರದಾರ ಸಾಹೇಬರಿಗೆ ಆತನನ್ನು ಕಂಡು ಆನಂದವಾಯಿತು. ಪದಕವನ್ನು ಸ್ವೀಕರಿಸಿ ನಮಸ್ಕಾರ ಮಾಡುವ ಮುಂದೆ ಆತನ ಕಣ್ಣುಗಳು ಹೊಳೆದವು. ಜಗತ್ತಿನಲ್ಲಿಯ ತರತರದ ಚಂಚಲ ಸೌಂದರ್ಯದ ಪ್ರತಿಬಿಂಬವನ್ನು ತಟ್ಟನೆ ತೆಗೆದುಕೊಳ್ಳುವ ಓಜಸ್ಸು ಅವುಗಳಲ್ಲಿ ಹೊಳೆಯುತ್ತಿತ್ತು.

ಸರದಾರ ಸಾಹೇಬರ ಕಡೆಯಿಂದ ಪದಕವನ್ನು ಸ್ವೀಕರಿಸುವದಕ್ಕಾಗಿ ಸ್ವಪ್ನಚಿತ್ರ ತೆಗೆದವನು ಮುಂದಕ್ಕೆ ಬರುವನೋ ಇಲ್ಲವೆಂಬುದರ ವಿಷಯದಲ್ಲಿ ಎಲ್ಲರಿಗೂ ಸಂಶಯವಾಗಿತ್ತು. ಆದರೆ ಆ ಸಂಶಯಕ್ಕಿಂತಲೂ ಆ ಚಿತ್ರಕಾರನ ಹೆಸರು ತಿಳಿದುಕೊಳ್ಳುವ ವಿಷಯದಲ್ಲಿ ಇಡೀ ಜನಸಮುದಾಯದಲ್ಲಿ ತೀವ್ರವಾದ ಕುತೂಹಲ ಉಂಟಾಗಿತ್ತು.

ಕಾರ್ಯದರ್ಶಿಗಳು ಪಾಕೀಟು ತೆರೆದು ನೋಡಿದರು. ಅವರ ಬಾಯಿಂದ ಶಬ್ದಗಳೇ ಹೋರಬೀಳಲೊಲ್ಲವು. ಸರದಾರ ಸಾಹೇಬರು ಅವರ ಮುಖದ ಕಡೆಗೆ ನೋಡುತ್ತಲೇ ನಿಂತುಬಿಟ್ಟರು. ಏನಾದರೂ ಕಾರ್ಯದರ್ಶಿಗಳು ಒಂದು ಶಬ್ದವನ್ನಾದರೂ ಉಚ್ಚರಿಸುವ ಲಕ್ಷಣ ತೋರಲಿಲ್ಲ. ಸರದಾರ ಸಾಹೇಬರು ಅವರ ಕೈಯಲ್ಲಿಯ ಕಾಗದವನ್ನು ಕಸಿದುಕೊಂಡು ನೋಡಿದರು. ಕಾರ್ಯದರ್ಶಿಗಳಿಗೆ ಆದ ರೋಗವು ಸಾಂಸರ್ಗಿಕವೆಂದು ಪ್ರೇಕ್ಷಕರಿಗೆ ತಳಿದುಬಂದಿತು. ಸರದಾರ ಸಾಹೇಬರವರೂ ಬೊಂಬೆಯಂತೆ ಸ್ತಬ್ಧರಾಗಿ ನಿಂತುಬಿಟ್ಟರು.

ಕಡೆಗೆ, 'ಜಾಗೃತಿ' ಚಿತ್ರತೆಗೆದ ಚಿತ್ರಕಾರನೇ 'ಸ್ವಪ್ನ'ವನ್ನು ತೆಗೆದಿದ್ದನೆಂದು ಎಲ್ಲರಿಗೂ ತಿಳಿಯಿತು. ಸರದಾರ ಸಾಹೇಬರ ಮನಸ್ಸಿನ ಮೇಲೆ ಇದರ ಆಘಾತವಾಗದೆ ಇರಲಿಲ್ಲ. ಆದರೆ ಅದರಲ್ಲಿ ಆನಂದದ ಅಂಶವೇ ಅಧಿಕವಾಗಿತ್ತು.

ಸರದಾರ ಸಾಹೇಬರು ಶಕ್ಯವಿದ್ದಷ್ಟು ಪ್ರಸಂಗಾವಧಾನವನ್ನು ಕಲೆ

ಹಾಕಿ ಪಾನಿಪತ್ತಿನ ಮೇಲಿನ ತಮ್ಮ ಶೂರ ಪೂರ್ವಜರ ಸ್ಮರಣಮಾಡಿ, ಆ ಚಿತ್ರಕಾರನಿಗೆ ದ್ವಂದ್ವಯುದ್ಧಕ್ಕಾಗಿ ಆವ್ಹಾನಕೊಟ್ಟರು.

"ಈ ಎರಡನೇ ಚಿತ್ರವಾದರೂ ನಿಮ್ಮದೇ ಏನು?"

"ಹೌದು!"

"ಬಹಳ ದಿವಸಗಳ ಹಿಂದೆ— ನೀವು ಶಾಲೆಯಲ್ಲಿದ್ದಾಗ ತೆಗೆದಿರ ಬಹುದು ಅದನ್ನು!"

"ಛೇ! ಎರಡೂ ಚಿತ್ರಗಳನ್ನು ಒಂದೇ ವೇಳೆಗೆ ತೆಗೆದೆ. ಪ್ರದರ್ಶನದ ಏರ್ಪಾಡು ಜಾಹೀರವಾದನಂತರ ತೆಗೆದದ್ದು."

"ಈ ನಿಮ್ಮ ಎರಡನೇ ಚಿತ್ರ, ಬಹುತರವಾಗಿ ಒಂದು ಇಂಗ್ರೇಜಿ ಚಿತ್ರದ ಮೇಲಿಂದ ತೆಗೆದಿರಬಹುದಲ್ಲವೇ?"

ಚಿತ್ರಕಾರನ ಕಂಣುಗಳಲ್ಲಿ ತಿರಸ್ಕಾರವು ಕ್ಷಣಮಾತ್ರ ಮಿನುಗಿ ಹೋಯಿತಲ್ಲ.

"ಎರಡೂ ಚಿತ್ರಗಳು ನಮ್ಮ ಸಮಾಜದಲ್ಲಿಯವೇ ಅವೆ" ಅವನು ಶಕ್ಯವಿದ್ದಷ್ಟು ಶಾಂತವಾಗಿ ಹೇಳಿದ.

"ನಮ್ಮ ಸಮಾಜದಲ್ಲಿಯವೇ?"

"ಹೌದು ನಮ್ಮ ನಿಮ್ಮಂಥವರ ಮನೆಯಲ್ಲಿ ಕಾಣತಕ್ಕವುಗಳು ಈ ಎರಡೂ ಚಿತ್ರಗಳಲ್ಲಿಯ ಅನುಭವಗಳು ನನ್ನವೇ ಆಗಿವೆ. ಆಯುಷ್ಯದ ಲ್ಲಿಯ ಉತ್ಕಟ ಕ್ಷಣಗಳ ಸೌಂದರ್ಯವು ಕಲಾವಂತನ ಹೃದಯದಲ್ಲಿ ಯಾವಾಗಲೂ ಜಾಗ್ರತವಾಗಿರುತ್ತದೆ. ಮೊದಲನೇ ಚಿತ್ರದಲ್ಲಿಯ ಸುಖದ ಕ್ಷಣವನ್ನು ನಾನು ಇತ್ತೀಚೆಗೆ ಅನುಭವಿಸಿದೆ. "ಸ್ವಪ್ನ"ದಲ್ಲಿಯ ಸುಖದ ಕ್ಷಣವು ೫-೬ ವರ್ಷದ ಪೂರ್ವದಲ್ಲಿಯದು. ಅವೆರಡುಗಳಲ್ಲಿ ಅಂತರವು ಇಷ್ಟೇ!"

ಸರದಾರ ಸಾಹೇಬರು ಮನಸ್ಸಿನಲ್ಲಿಯೇ ರಾಮರಕ್ಷಾಮಂತ್ರವನ್ನು ಹೇಳತೊಡಗಿದರು.

'ಸ್ವಪ್ನ' ಚಿತ್ರವನ್ನು ಕೊಂಡುಕೊಳ್ಳುವವರ ಸಲುವಾಗಿ ಕೆಲವು ಜನ ರಸಿಕರು, ಆ ಚಿತ್ರಕಾರನ ಬಳಿಗೆ ಹೋದರು. ಚಿತ್ರವು ಮೊದಲೇ ಮಾರಿಹೋಗಿತ್ತು. ಒಂದು ದೃಷ್ಟಿಯಿಂದ ನೋಡಿದರೆ ಅದರಲ್ಲಿ ಆಶ್ಚರ್ಯ ಪಡುವಂಥಾದ್ದೇನೂ ಇದ್ದಿಲ್ಲ. ಅವರು ಸಹಜವಾಗಿಯೂ ಅದನ್ನು ತೆಗೆದು ಕೊಂಡವನ ಹೆಸರನ್ನು ವಿಚಾರಿಸಿದರು. ಚಿತ್ರಕಾರನು ಗೊಂದಲದಲ್ಲಿ ಬಿದ್ದು ಕಡೆಗೆ ಹೇಳಿದ. ಆ ಚಿತ್ರವನ್ನು ಸರದಾರ ಇಂಗಳೆ ಸಾಹೇಬರು ಒಯ್ದರು." ಈ ಗೊಂದಲದಲ್ಲಿ ಸರದಾರ ಸಾಹೇಬರ ಹೆಸರಿನ ಪೂರ್ವದಲ್ಲಿ, ಶ್ರೀ ಶಂಕರಾಚಾರ್ಯರು ಕೊಟ್ಟ "ಆರ್ಯಧರ್ಮಸಂರಕ್ಷಕ" ಎಂಬ ಬಿರುದನ್ನು ಉಪಯೋಗಿಸಬೇಕೆಂಬ ವಿಚಾರಕೂಡ ಆ ಚಿತ್ರಕಾರನಿಗೆ ಉಳಿಯಲಿಲ್ಲ.

ಇಂಥ ಚಿತ್ರಗಳು ಯಾವಾಗಲೂ ಜನರ ದೃಷ್ಟಿಗೆ ಬಿದ್ದು ಆರ್ಯ ಸಂಸ್ಕೃತಿಗೆ ಪೆಟ್ಟು ತಗಲಬಾರದೆಂದೇ ಅವರು ಅದನ್ನು ತೆಗೆದುಕೊಂಡು ಹೋಗಿರಬಹುದು! ತಮ್ಮ ಬಂಗಲೆದಲ್ಲಿಯ ದಿವಾಣಖಾನೆಯಲ್ಲಿಯಾದರೂ ಅದನ್ನು ಹೆಚ್ಚುವಂತಿದ್ದಿಲ್ಲ. ಹೋಗು ಬರುವ ಜನರೆಲ್ಲರೂ ಅಲ್ಲಿಯೇ ಕೂಡುತ್ತಿದ್ದರು. ಅವರ ಆರ್ಯಸಂಸ್ಕೃತಿ —

ಆ ಪ್ರಶ್ನೆ ಬಿಟ್ಟುಬಿಟ್ಟರೂ ಕೂಡ, ಮನೆಯಲ್ಲಿಯ ೧೦-೧೨ ಜನ ಹೆಂಡರೂ, ಹದಿನೇಳು ಮಕ್ಕಳೂ, ಒಂಭತ್ತು ಮೊಮ್ಮಕ್ಕಳೂ ಇವರ ದೃಷ್ಟಿಗಾದರೂ ಬೀಳುವಂತೆ ಆ ಚಿತ್ರವನ್ನು ಹಚ್ಚುವಷ್ಟೇನೂ ಸರದಾರ ಸಾಹೇಬರು ವ್ಯವಹಾರಶೂನ್ಯರಾಗಿದ್ದಿಲ್ಲ. ನಿರುಪಾಯರಾಗಿ ಕಡೆಗೆ ಅವರಿಗೆ ಆ ಚಿತ್ರವನ್ನು ತಮ್ಮ ರಂಗಮಹಲಿನಲ್ಲಿಯೇ ಇಡಬೇಕಾಯಿತು!



# ಅವಳ ಕಣ್ಣುಗಳು.



ಹುಡಿಗೆಯು ಮುಖವನ್ನು ಮೇಲಕ್ಕೆತ್ತಿ ನೋಡಿದಳು. ಕ್ಲೈಯ್ಯನ್ನು ತೆಗೆದಕೂಡಲೆ ಹೊರಮುಚ್ಚಕದ ಗಿಡವು ಮತ್ತೆ ಮೊದಲಿನಂತೆ ಹಚ್ಚನೆ ನಿಲ್ಲುವದಿಲ್ಲವೆ? ನೋಡಲಿಕ್ಕೆ ಬಂದವರೆಲ್ಲರೂ ಚಹ ತೆಗೆದುಕೊಳ್ಳಲಿಕ್ಕೆ ಹತ್ತಿದರು. ಆಗ ಅವಳಿಗೆ ಎಷ್ಟೋ ಬಿಡುಗಡೆ ಎನಿಸಿತು. ಕೋರ್ಟಿನಲ್ಲಿ "ಉಲಟ ತಪಾಸಣಿ" ಮುಗಿದನಂತರ ಮನುಷ್ಯನಿಗೆ ಹೀಗೇ ಅನಿಸುತ್ತಿರಬಹುದೆಂಬ ಮಸುಕು ವಿಚಾರವೂ ಅವಳ ಮನಸ್ಸಿನಲ್ಲಿ ಬಂದುಹೋಯಿತು. ಇಡೀ ಆಯುಷ್ಯದ ಪ್ರವಾಸವನ್ನು ಯಾವ ವ್ಯಕ್ತಿಯ ಜೊತೆಯಲ್ಲಿ ಒಂದುವೇಳೆ ಮಾಡಬೇಕಾಗಬಹುದೋ ಅವನನ್ನು ಒಮ್ಮೆಯಾದರೂ ಚೆನ್ನಾಗಿ ನೋಡಬೇಕೆಂಬ ಇಚ್ಛೆಯು ಅವಳಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾಯಿತು. ಸಂಸಾರಸಾಗರದಲ್ಲಿ ತೇಲಿಹೋಗುತ್ತಿರುವಾಗ ಉಂಟಾಗಬಹುದಾದ ಕಷ್ಟ-ನಿಷ್ಠುರಗಳನ್ನು ಕೇವಲ ಒಂದು ಸ್ಮಿತಮಾತ್ರದಿಂದ ಕಳೆಯುವ ಮಾಯ ಆತನಲ್ಲಿರಬಹುದೇ?

ತನ್ನ ಕಡೆಗೆ ಯಾರೂ ನೋಡುತ್ತಿರಲಿಕ್ಕಿಲ್ಲೆಂಬ ಮನವರಿಕೆಯಿಂದಲೇ ಅವಳು ಮುಖವನ್ನು ಮೇಲಕ್ಕೆತ್ತುವ ಧೈರ್ಯಮಾಡಿದ್ದಳು. ಆದರೆ ಅವಳದೂ ಅನಂತನದೂ ನೋಟ ಕೂಡಿದೊಡನೆಯೇ ಅವಳಿಗೆ ನಾಚಿಕೆಯಿಂದ ಚೂರು ಚೂರಾದಂತಾಯಿತು. ಉಳಿದ ಜನರೆಲ್ಲರೂ ಫಲಾಹಾರಗಳಲ್ಲಿ ಮಗ್ನರಾಗಿದ್ದರು. ಆದರೆ ಅನಂತನಿಗೆ ಮಾತ್ರ ತಾನು ಬಸಿಯಲ್ಲಿ ಸುರುವಿಕೊಂಡ ಚಹದ ಅರಿವು ಸಹ ಇರಲಿಲ್ಲ. ಆತನ ಮನಸ್ಸು ಯಾವದೋ ಒಂದು ಯಕ್ಷಸೃಷ್ಟಿಯಲ್ಲಿ ಭ್ರಮಣಮಾಡುತ್ತಿರಬೇಕು ಆ ಯಕ್ಷಸೃಷ್ಟಿಯಲ್ಲಿ ಭ್ರಮಣಮಾಡುತ್ತಿರುವಾಗಲೇ ಆಶೆಯ ಸುಂದರವಾದ ಕಂಣುಗಳು ಅವನ ದೃಷ್ಟಿಗೆ ಬಿದ್ದವು. ಇಷ್ಟೊತ್ತಿನವರೆಗೆ ನಡೆದ ಎಲ್ಲ ಕಾರ್ಯಕ್ರಮದ ವಿಷಯದಲ್ಲಿ ಅವನಿಗೆ ಮನಸ್ವಿಯಾಗಿ ಸಿಟ್ಟು ಬಂದಿತು. ಹೆಸರು ಕೇಳುವದು, ಓದಿಸಿಕೊಳ್ಳುವದು, ಹಾಡಿಸಿ ನೋಡುವದು ಇತ್ಯಾದಿ

ಗಳಿಗಿಂತ "ನನ್ನ ಹುಡಿಗೆಯ ಕಂಙುಗಳನ್ನು ನೋಡಿರಿ" ಎಂದು ಇವಳ ತಂದೆ ತನಗೆ ಹೇಳಬಾರದಾಗಿತ್ತೇ?

ಸಣ್ಣವನಿರುವಾಗಿನಿಂದಲೇ ಅನಂತನಿಗೆ ಎಲ್ಲ ತರದ ಸೌಂದರ್ಯದ ಲೋಭ. ಐದುವರ್ಷದವನಿರುವಾಗಲೇ, ತನ್ನ ಕೊಂಕಣದಲ್ಲಿಯ ಮುತ್ತಜ್ಜನ ಮನೆಗೆ ಹೋದಾಗ ಸಾವಿರಾರು ತರದ ಸಿಂಪುಗಳನ್ನು ಕೂಡು ಹಾಕಿದ್ದ. ಆ ಸುಂದರವಾದ ಸಿಂಪುಗಳನ್ನು ನೋಡಿದರೆ ಯಾವ ಹುಡಿಗೆಗಾದರೂ ತನ್ನ ಗೊಂಬೆಯ ಲಗ್ನಸಮಯದಲ್ಲಿ ಅವುಗಳನ್ನು ತಾಟುಗಳಾಗಿ ಉಪಯೋಗಿಸಬೇಕೆಂಬ ಮೋಹ ಉಂಟಾಗದೆ ಇರುವದು ಶಕ್ಯವಿರಲಿಲ್ಲ! ಆತನ ಪ್ರತಿಯೊಂದು ಪುಸ್ತಕದಲ್ಲಿಯೂ ನವಿಲುಗರಿ ಇದ್ದೇ ಇರುತ್ತಿತ್ತು. ಅವನ ಮನೆಯಿಂದ ಎಷ್ಟೋ ದೂರದಲ್ಲಿದ್ದ ಪಾರಿಜಾತದ ಹೂವುಗಳನ್ನು ಚಿಕ್ಕಂದಿನಿಂದ ಪ್ರತಿನಿತ್ಯವೂ ತರುತ್ತಿದ್ದ. ಆತನ ಅಜ್ಜಿಗೆ ತನ್ನ ಮೊಮ್ಮಗ ದೊಡ್ಡ ದೇವಭಕ್ತನಾಗುವನೆಂದು ಅನಿಸುತ್ತಿತ್ತು. ಆದರೆ ನಸುಗೆಂಪು ದೇಟಿನ ಆ ಶುಭ್ರವಾದ ಸುಕುಮಾರ ಹೂವುಗಳ ಥಳಿಯನ್ನು ನೋಡಿದಕೂಡಲೆ ಆಕಾಶದಲ್ಲಿಯ ಚಿಕ್ಕೆಗಳೇ ಆರಿಸಿಕೊಂಡು ಹೋಗಲಿಕ್ಕೆ ಸಿಕ್ಕಂತೆ ಅನಂತನಿಗೆ ಆಗುವ ಆನಂದದ ಕಲ್ಪನೆಯೇ ಆತನ ಮುತ್ತಜ್ಜಿಗೆ ಇರಲಿಲ್ಲ. ಕಾಲೇಜಿನಲ್ಲಿರುವಾಗ ಒಂದು ಸ್ವಲ್ಪ ಬೆಲೆಯ ಸಾಧಾರಣವಾಗಿ ಕಟ್ಟಲ್ಪಟ್ಟ ಪುಸ್ತಕವನ್ನು ಬಿಟ್ಟು, ಹೆಚ್ಚಿನ ಬೆಲೆಯ ಮುದ್ದಾಗಿ ಕಟ್ಟಲ್ಪಟ್ಟ ಪುಸ್ತಕವನ್ನು ಕೊಳ್ಳುವದರ ಸಲುವಾಗಿ ಅವನು ಒಮ್ಮೆ ಉಪವಾಸ ಮಾಡಿದ್ದ. ಅ ದಿವಸವೇ ತನ್ನ ಏಕಾದಶಿ ಬಂದಿದೆ ಎಂದು ಹೇಳಿದ್ದಕ್ಕೆ ಎಲ್ಲರೂ ಅವನನ್ನು "ಪುಂಡಲೀಕ ವರದ ಹರಿ ವಿಠ್ಠಲ" ಎಂದು ಸ್ವಾಗತಿಸುತ್ತಿದ್ದರು.

ಈ ಮೂಲಕವಾಗಿಯೇ ಆಶೆಯ ಕಣ್ಣುಗಳನ್ನು ನೋಡಿದಕೂಡಲೆ ತಾನು ತಿರುಗಾಡುತ್ತಿರುವ ಯಕ್ಷಸೃಷ್ಟಿಯಲ್ಲಿಯ ಅಧಿದೇವತೆಯಾಗಿದ್ದ ಅಪ್ಸರೆಯನ್ನು ಕಂಡಂತೆ ಆತನಿಗೆ ಅನಿಸಿತು. ಅವಳ ಒಂದು ಕಣ್ಣಲ್ಲಿ ಆಕಾಶದಲ್ಲಿಯ ನೀಲವರ್ಣವು ತಾರೆಗಳ ತೇಜವನ್ನು ತಕ್ಕೊಂಡು ನರ್ತಿ

ಸುವಂತೆ ತೋರುತ್ತಿತ್ತಾದರೆ ಎರಡನೆಯ ಕಣ್ಣಲ್ಲಿ ಸಾಗರದ ನೀಲವರ್ಣವು ರತ್ನಗಳ ತೇಜಸ್ಸಿನಿಂದ ಹೊಳೆಯುತ್ತಿತ್ತು. ಆ ರಮಣೀಯ ಸೌಂದರ್ಯದ ಆನಂದವು ಅವನ ಮುಖಮುದ್ರೆಯ ಮೇಲೆ ಮೂಡದೆ ಇರಲಿಲ್ಲ.

ಆಶೆಯು ಎದ್ದು ಒಳಕ್ಕೆ ಹೋದಳು. ಆಕೆಯ ತಂದೆ ಪ್ರಶ್ನಾರ್ಥಕದೃಷ್ಟಿಯಿಂದ ಅನಂತನ ಕಡೆಗೆ ನೋಡಿದ. ಅನಂತನ ಮುಖಮುದ್ರೆಯನ್ನು ನೋಡಿದರೆ ಅವನೇನು ನಕಾರಾರ್ಥವಾದ ಉತ್ತರವನ್ನು ಕೊಡುವಂತೆ ತೋರಲಿಲ್ಲ. ಆದರೂ "ವಿಚಾರಮಾಡಿ ತಿಳಿಸುವೆ" ಎಂಬ ಶಬ್ದಗಳು ಅವನ ಬಾಯಿಂದ ಹೊರಬಿದ್ದವು. ಪಾಪ! ವರಾನ್ವೇಷಿಯಾದ ತಂದೆ! ಆಯುಷ್ಯದ ವರ್ತಮಾನಪತ್ರದಲ್ಲಿ ಇಂಥ ಮುಜಕೂರನ್ನು ಓದಿ ಓದಿ ಇಂಥ ಉತ್ತರವೇನೂ ಅವನಿಗೆ ಹೊಸದಾಗಿರಲಿಲ್ಲ!

ಆ ದಿವಸ ರಾತ್ರಿ ಅನಂತನಿಗೆ ಮಾತ್ರ ಏನೂ ಮಾಡಿದರೂ ನಿದ್ರೆ ಬರಲೊಲ್ಲದು. ಮಳೆಗಾಲ ಬರುವ ಸಮಯದಲ್ಲಿ ದೊಡ್ಡ ದೊಡ್ಡ ತೋಪುಗಳಲ್ಲಿ ಗೋಡಂಬೆಯ ಗೊಂಚಲಗಳು ಹೊಳೆಯುವಂತೆ, ಆತನ ಬೇರೆ ಬೇರೆ ವಿಚಾರಗಳಲ್ಲಿಯೂ ಆಶೆಯ ಕಣ್ಣುಗಳು ಒಂದೇ ಸವನೆ, ನಕ್ಕು ನಲಿದು ನರ್ತಿಸುತ್ತಿದ್ದವು. ಒಮ್ಮೆಲೆ, ಅವರಿಗೆ ಲಗ್ನ ಮಾಡಿಕೊಳ್ಳುವೆನೆಂದು ತಾನು ಯಾಕೆ ಹೇಳಿಬರಬಾರದಾಗಿತ್ತು ಎಂದು ಅವನಿಗೆ ಅನಿಸಿತು. ಸುಂದರವಾದ ಕಣ್ಣುಗಳನ್ನು ಕೇವಲ ನೋಡಲಿಕ್ಕೆ ಏನು ಬೇಕಾದ್ದನ್ನು ಮಾಡಬಹುದಾದ ತಾನು, ಆ ಕಣ್ಣುಗಳು ತನ್ನವೇ ಆಗಲಿಕ್ಕೆ ಬಂದ ಸುಸಂಧಿಯನ್ನು—

ಕಬ್ಬಿಣವನ್ನು ಮುಟ್ಟಿಸಿದ ಕೂಡಲೇ ಚಿನ್ನವಾಗುವಂಥ ಕಲ್ಲು ಜಗತ್ತಿನಲ್ಲಿದ್ದರೆ ಚಿನ್ನವನ್ನು ಮುಟ್ಟಿಸಿದರೆ ಕಬ್ಬಿಣವಾಗಬಹುದಾದಂಥ ಕಲ್ಲಾದರೂ ಜಗತ್ತಿನಲ್ಲಿ ಇದ್ದೇ ಇರಬೇಕಲ್ಲವೇ? ಎಲ್ಲಿಯೂ ಇರದಿದ್ದರೆ ಅನಂತನ ಮನಸ್ಸಿನಲ್ಲಿಯಾದರೂ ಇತ್ತು. ಸುಂದರವಾದ ವಸ್ತುಗಳ ವಿಷಯದಲ್ಲಿ ಅವನಲ್ಲಿದ್ದ ವಿಲಕ್ಷಣ ಪ್ರೀತಿಯಂತೆ, ಆ ಸೌಂದರ್ಯನಾಶದ ವಿಚಾರದಿಂದಲೂ ಅವನು ವಿಹ್ವಲನಾಗುತ್ತಿದ್ದ. ಚಿಕ್ಕಂದಿನಲ್ಲಿ ತಾನು ತನ್ನ

ಮುತ್ತಜ್ಜಿಯು ಸಲುವಾಗಿ ತಂದ ಪಾರಿಜಾತದ ಹೂವುಗಳನ್ನು ವಾಸನೆಯು ಸಲುವಾಗಿ ಕೈಯಲ್ಲಿ ತೆಗೆದುಕೊಂಡು, ಮುಂದೆ ಮಾತಿನ ಭರದಲ್ಲಿ ಹಾಗೆಯೇ ಅವುಗಳನ್ನು ಮುಷ್ಟಿಯಲ್ಲಿ ಬಿಗಿಯಾಗಿ ಹಿಡಿದು ಮರೆತು ಬಿಟ್ಟು ಮುಂದೆ ಒಮ್ಮೆಲೆ ನೆನಪಾಗಿ ಮುಷ್ಟಿ ಬಿಚ್ಚಿನೋಡಿದರೆ ಅಲ್ಲೇನು ಇರ ಬೇಕು? ಹೂವುಗಳು ಬಾಡಿ ಕಪ್ಪಿಟ್ಟುಹೋಗಿದ್ದವು. ಅದನ್ನು ಕಂಡು ತನ್ನ ಕಣ್ಣಲ್ಲಿ ತುಂಬಿದ ನೀರು ಇನ್ನೂವರೆಗೆ ಅವನಿಗೆ ನೆನಪಾಗುತ್ತಿತ್ತು.

ಆ ಪಾರಿಜಾತದ ಹೂವುಗಳಂತೆಯೇ ಅವನು ಇನ್ನೊಂದು ಸಂಗತಿ ಯನ್ನು ಮರೆತಿರಲಿಲ್ಲ. ಆತನ ಲಂಗೋಟಿಯ ಗೆಳೆಯನೊಬ್ಬ ಒಂದು ದೊಡ್ಡ ಮೋಜು ತೋರಿಸುವೆನೆಂದು ಆತನನ್ನು ತನ್ನ ಮನೆಗೆ ಕರೆದು ಕೊಂಡು ಹೋದ. ಒಳಗಿನಿಂದ ೨೫-೩೦ ಕಡ್ಡಿಯ ಪೆಟ್ಟಿಗೆಗಳನ್ನು ತೆಗೆದು ಕೊಂಡು ಬಂದ. ಅವನು ಬಹುತರವಾಗಿ ಒಂದು ಬಹಳ ಉದ್ದವಾದ ಮಾಲುಗಾಡಿಯನ್ನು ಮಾಡಿತೋರಿಸುವನೆಂದು ಅನಂತ ತಿಳಿದುಕೊಂಡ. ಆದರೆ, ಅವನ ಮಿತ್ರನಿಗೆ ಮಾಲುಗಾಡಿಯ ವಿಸ್ತಾರವನ್ನು ತೋರಿಸು ವದಕ್ಕಿಂತಲೂ ಪೆಟ್ಟಿಗೆಯೊಳಗಿನ ಮಾಲಿನ ಪ್ರದರ್ಶನ ಮಾಡುವದಕ್ಕಾಗಿ ಹೆಚ್ಚು ಉತ್ಸುಕತೆಯಾಗಿತ್ತು. ಅವನು ಒಂದೊಂದೇ ಪೆಟ್ಟಿಗೆಯನ್ನು ತೆಗೆಯಲಾರಂಭಿಸಿದ ಮಾತ್ರ! ಅನಂತನ ಮೈಜುಮ್ಮೆಂದಿತು. ಮೊದಲ ನೆಯ ಪೆಟ್ಟಿಗೆಯಲ್ಲಿ ಒಂದು ಕರ್‍ರಗಿನ ಸುಂದರವಾದ ಪಾತರಗಿತ್ತಿ ಅನಂತ ಅದಕ್ಕೆ ಗಣಪತಿ ಎಂದು ಹೆಸರು ಕೊಟ್ಟಿದ್ದು---ದಾರದಿಂದ ಕಟ್ಟಲ್ಪಟ್ಟದ್ದರಿಂದ ಸುಮ್ಮನೆ ಬಿದ್ದುಕೊಂಡಿತ್ತು. ಎರಡನೇ ಪೆಟ್ಟಿಗೆ ಯಲ್ಲಿ ಒಂದು ಹಳದೀ ಬಣ್ಣದ ಪಾತರಗಿತ್ತಿ---ಅದರ ಮೈಮೇಲಿನ ಸಣ್ಣ ಸಣ್ಣ ಚಿಕ್ಕೆಗಳು ಎಷ್ಟೊಂದು ಮೋಹಕವಾಗಿದ್ದವು---ಅದಾದರೂ ಹೆಸ ರಿಗೆ ಮಾತ್ರ ಜೀವಂತವಾಗಿದ್ದಿತು. ಆ ಎಲ್ಲ ಪೆಟ್ಟಿಗೆಗಳ ಪರೀಕ್ಷಣ ಮುಗಿಯುವದರಲ್ಲಿಯೇ ಅನಂತನು ಒಂದು ಪಾತರಗಿತ್ತಿಯನ್ನು ಬಂಧ ಮುಕ್ತವನ್ನಾಗಿ ಮಾಡಿಬಿಟ್ಟ. ಆ ಮೂಲಕ ಇಬ್ಬರು ಮಿತ್ರರಲ್ಲಿ ಜಗಳ

ವಾಗಿ ಮುಂದೆ ಆರು ತಿಂಗಳ ವರೆಗೆ ಒಂದೇ ಬೀದಿಯಲ್ಲಿ ಇಬ್ಬರೂ ಹಾಯಿದುಹೋದರೂ ಒಬ್ಬರನ್ನೊಬ್ಬರು ನೋಡುತ್ತಿರಲಿಲ್ಲ.

ಚಿಕ್ಕಂದಿನಲ್ಲಿಯೇ ಬಿದ್ದ ದೈವದ ಆಘಾತದ ಮೂಲಕ ಅನಂತನ ಅಳ್ಳೆಮನದ ಸ್ವಭಾವವು ಪರಾಕಾಷ್ಟೆಗೆ ಹೋಗಿ ಮುಟ್ಟಿತ್ತು. ಆತನಿಗೆ ತಂದೆಯ ಮೇಲೆ ಅತ್ಯಂತ ಪ್ರೇಮ ಆದರೆ ಅವರು ಬಂಡಿಯಿಂದ ಬಿದ್ದ ನಿಮಿತ್ತದಿಂದ ಹಾಸಿಗೆ ಹಿಡಿದವರು ತಿರುಗಿ ಏಳಲಿಲ್ಲ! ಆತನ ಪ್ರೀತಿಯ ತಂಗಿ ಚಳಿಗಾಲದಲ್ಲಿ ಒಂದು ದಿನ ಒಲೆಯ ಮುಂದೆ ಕೂತಾಗ ಸೀರೆಗೆ ಉರಿ ತಗಲಿ ಹತ್ತಿದ ಬೆಂಕಿಯು ಅವಳಿಗೆ ಚಿತೆಯಾಗಿಯೇ ಪರಿಣಮಿಸಿತು. ಅನಂತನಿಗೆ ಅವಳ ಭಾವಚಿತ್ರ (ಫೋಟೋ)ದ ಕಡೆಗಾದರೂ ನೋಡುವದಕ್ಕೆ ಧೈರ್ಯ ಸಾಲುತ್ತಿರಲಿಲ್ಲ. ಭಾವಚಿತ್ರ (ಫೋಟೋ) ವನ್ನು ನೋಡಿದಕೂಡಲೆ ಅವಳು ಸುಟ್ಟುಕೊಂಡಾಗಿನ ನರಳುವಿಕೆ ಅವನ ಕಿವಿಯಲ್ಲಿ ದುಮುಕಿದಂತಾಗುತ್ತಿತ್ತು.

ಜೀವನದಲ್ಲಿಯ ಕೆಡಕೇ ಯಾವಾಗಲೂ ಅವನಿಗೆ ಎದ್ದು ತೋರುವದು. ಈ ಅಳ್ಳೆಮನದ ಪರಿಣಾಮವು ಆತನ ಆಯುಷ್ಯದ ಮೇಲೆ ಆಗದೆ ಇರಲಿಲ್ಲ. ಆತನ ಕಾಲೇಜಿಗೆ ಖರ್ಚು ಪೂರೈಸುವ ಸೋದರಮಾವ, ಅನಂತ ಡಾಕ್ಟರನಾಗಲೀ ಇಂಜಿನಿಯರನಾಗಲೀ, ಕಡೆಗೆ ಒಬ್ಬ ವಕೀಲನಾಗಲೀ, ಆಗಬೇಕೆಂದು ಬಯಸುತ್ತಿದ್ದ. ಆದರೆ, ಡಾಕ್ಟರನಾದರೆ ಅಜ್ಞಾನದ ಮೂಲಕ ತನ್ನ ಕೈಯಿಂದ ಯಾವನಾದರೊಬ್ಬನ ಪ್ರಾಣಘಾತವಾಗಬಹುದು, ಇಂಜಿನಿಯರನಾದರೆ ಕೆಲಸ ಮಾಡುವಾಗ ಹೆದರಿಕೆಯ ಸ್ಥಳಗಳಲ್ಲಿ ಕೂಲಿಕಾರರನ್ನು ಏರಿಸುವದೂ ಇಳಿಸುವದೂ ಮಾಡಬೇಕಾಗಬಹುದು. ವಕೀಲನಾದರೆ, ಖೂನಿಯನ್ನು ಮಾಡಿದ್ದರೂ ಮಾಡಿಲ್ಲವೆಂದು ಸುಳ್ಳು ಪ್ರತಿಪಾದನೆ ಮಾಡಬೇಕಾಗಬಹುದೆಂಬ ಕಲ್ಪನೆಗಳಿಂದ ವ್ಯಾಕುಲನಾಗಿ ಆ ಎಲ್ಲ ಮಾರ್ಗಗಳನ್ನು ಬಿಟ್ಟುಕೊಟ್ಟು, ಎಂ. ಎ. ಪರೀಕ್ಷೆಯಾದ ಕೂಡಲೇ, ಶಿಕ್ಷಕನಾಗಿಬಿಟ್ಟ. ಬುದ್ಧನಂತೆ ಅವನದೂ ಇದೊಂದು ಪ್ರಕಾರದ ಸನ್ಯಾಸವೇ ಆಗಿತ್ತು.

ಈ ತೆರದ ಅಳ್ಕನವು (Sensitiveness) ಒಳ್ಳೆಯದಲ್ಲವೆಂದೂ ಅವನಿಗೆ ನಡುನಡುವೆ ಅನಿಸುತ್ತಿತ್ತು. ಆದರೆ ಏನು ಮಾಡಿದರೂ ಅವನಿಗೆಅದನ್ನು ಹೋಗಲಾಡಿಸುವ ಉಪಾಯ ತೋಚಲಿಲ್ಲ. ಬುದ್ಧಿವಾದವೆಂದರೆ ಸ್ಪಷ್ಟವಾದ ಮಾರ್ಗವನ್ನು ತೋರಿಸುವ ಮಿಂಚುದೀಪವೇನೋ ನಿಜ! ಆದರೆ ಕುರುಡ ಭಾವನೆಗಳಿಗೆ ಅದರಿಂದೇನು ಪ್ರಯೋಜನ?

ವಸ್ತುವು ಎಷ್ಟು ಸಣ್ಣದಾಗಿದ್ದರೂ ಪೃಥ್ವಿಯ ಆಕರ್ಷಣವನ್ನು ತಪ್ಪಿಸಲಾರದು. ಆಶೆಯ ಸುಂದರವಾದ ಕಂಣುಗಳ ಭವಿತವ್ಯದ ಭೀತಿಯಿಂದ ವಿಚಾರ ಮಾಡುವ ಆತನ ಭಾವನಾಮಯ ಹೃದಯವಾದರೂ ಕಟ್ಟಕಡೆಗೆ ಕಟಾಕ್ಷಜಾಲದಲ್ಲಿ ಸಿಲುಕಿಯೇ ಬಿಟ್ಟಿತು!

× × × ×

ಎಷ್ಟೋ ಸಾರೆ ತನ್ನ ಕಣ್ಣುಗಳ ಕಡೆಗೆ ನೋಡುತ್ತಿರುವಾಗ ಅನಂತ ಅವಳ ಕೈಗೆ ಸಿಕ್ಕಿದ್ದ. ಆಗ ಅವಳು ನಸುನಗುತ್ತ ಕೇಳುತ್ತಿದ್ದಳು.

"ಇತ್ತೀಚೆಗೆ ಹುಚ್ಚು ಹಿಡಿದದೆ ಕಾಣುತ್ತದೆ?"

"ಇಲ್ಲವೆಂದು ಯಾರು ಹೇಳುವರು?"

"ಯಾತರದು ಅದು ಹುಚ್ಚು? ನನ್ನದೆ?"

"ನಿನ್ನದಲ್ಲ"

"ಹೀಗೇನು? ಎರಡನೇಯವಳ ಕೂಡ ನನ್ನನ್ನು ಹೋಲಿಸಿ ನೋಡುವ ಸಲುವಾಗಿಯೇ ಇಷ್ಟು ದಿಟ್ಟಿಸಿ ನೋಡುವಿರಿ ಅಲ್ಲವೆ? ಹೌದಲ್ಲs?"

"ಹಾಗಲ್ಲs!"

"ಹಾಗಾದರ ಹ್ಯಾಗರೀ"

ಆಶೆಯ ಈ ತಾಲಬದ್ಧ ಪ್ರಶ್ನೆಯಾದ ನಂತರ ಇಬ್ಬರೂ ಮನಸೋಕ್ತವಾಗಿ ನಗುತ್ತಿದ್ದರು. ಅನಂತ ಹೇಳುತ್ತಿದ್ದ.

"ನನಗೆ ಹುಚ್ಚು ಹಿಡಿದದ್ದು ನಿನ್ನ ಕಣ್ಣುಗಳದು!"

"ಅಂಥಾದ್ದೇನು ತುಂಬಿಕೊಂಡಿದೆ ಅದರಲ್ಲಿ? ಬಹಳವಾದರೆ ಒಂದಿಷ್ಟು ನೀರು ಇದ್ದಿರಬಹುದು. ಅಷ್ಟೆ!''

"ಬರೆ, ನೀರು ತುಂಬಿದ್ದಾದರೆ ಮನುಷ್ಯನಿಗೆ ಅಷ್ಟೇನೂ ಹುಚ್ಚು ಹಿಡಿಯುತ್ತಿರಲಿಲ್ಲ!"

ಆಶೆಗೆ ಇನ್ನು ಮುಂದೆ ನಗುತಡೆಯಲಿಕ್ಕಾಗುತ್ತಿದ್ದಿಲ್ಲ. ಅನಂತನು ಗಂಭೀರವಾಗಿ ಹೇಳುತ್ತಿದ್ದ "ಆಶೆ, ನೀನೊಂದು ಹೂವು. ನಿನ್ನ ಈ ಕಣ್ಣುಗಳೆಂದರೆ ಆ ಹೂವಿನ ಸುವಾಸ."

ಮಧ್ಯರಾತ್ರಿಯ ಸಮಯದಲ್ಲಿ ಆಶೆಗೆ ನಿದ್ರೆಹತ್ತಿದಾಗ, ಅವಳ ಮುಚ್ಚಿಕೊಂಡ ಕಂಣುಗಳನ್ನು ನೋಡಿ ಅನಂತನ ಮನಸ್ಸಿನಲ್ಲಿ ಇಲ್ಲದ ವಿಚಾರಗಳು ಬರುತ್ತಿದ್ದವು. ಸಂಧ್ಯಾಸಮಯದಲ್ಲಿ ಮುಚ್ಚಿಕೊಂಡ ಹೂವುಗಳೆಲ್ಲವೂ ಪ್ರಭಾತದಲ್ಲಿ ಮತ್ತೆ ಅರಳುವವಷ್ಟೇ! ನಿಸರ್ಗದಲ್ಲಿ ಈ ನಿಯಮಕ್ಕೆ ಏನಾದರೂ ಅಪವಾದಗಳಿರಬಹುದೋ? ಆತನ ಇಂಥ ವಿಚಿತ್ರ-ವಿಕೃತ ವಿಚಾರಗಳು ಒಂದು ದಿನ ಅವನು ಶಾಲೆಯಲ್ಲಿ ಪಾಠ ಹೇಳುತ್ತಿರುವಾಗಲೇ ತಲೆದೋರಿದವು. ಇಂಗ್ರೇಜಿಯಲ್ಲಿ ನಿಬಂಧದ ಸಲುವಾಗಿ ಅವನು ಹುಡುಗರಿಗೆ ಬುದ್ಧನ ಚರಿತ್ರೆ ಹೇಳುತ್ತಿದ್ದ. ರೋಗಿಯನ್ನೂ ಹೆಣವನ್ನೂ ನೋಡಿ ಬುದ್ಧನಿಗೆ ಬಂದ ವೈರಾಗ್ಯ—ಮಾಸ್ತರರು ಒಮ್ಮೆಲೆ ಸ್ತಬ್ಧರಾಗಿ ಶೂನ್ಯದೃಷ್ಟಿಯಿಂದ ಏನು ನೋಡುತ್ತಿರಬಹುದೆಂಬದು ವರ್ಗದಲ್ಲಿಯ ಹುಡುಗರಿಗೆ ಎಂದೂ ತಿಳಿಯಲಿಲ್ಲ. ಆದರೆ ಬುದ್ಧನ ವೈರಾಗ್ಯದ ಜೊತೆಯಲ್ಲಿ ಅನಂತನಿಗೆ ಆಶೆಯ ಕಣ್ಣುಗಳ ನೆನಪಾಗಿತ್ತು!

ಆ ದಿವಸ ಆತನಿಗೆ ಮನೆಗೆ ಬರಲಿಕ್ಕೆ ಕೂಡ ಸ್ವಲ್ಪ ಭಯವೆನಿಸಹತ್ತಿತು! ಆಶೆಯ ಮೋಹಕವಾದ ಕಣ್ಣುಗಳು, ಮತ್ತು ಬುದ್ಧನ ವೈರಾಗ್ಯದ ಕಥೆ! ಶಾಲೆ ಬಿಟ್ಟಕೂಡಲೆ ಮನೆಗೆ ಬರದೆಯೇ ತಿರುಗಾಡಲಿಕ್ಕೆ ಹೋದ. ತಿರುಗಿ ಬರುವಾಗ ದಾರಿಯಮೇಲಿನ ದೇವಾಲಯವನ್ನು ಸಹಜವಾಗಿಯೇ ಸೇರಿದ! ದೇವಾಲಯದ ಸಭಾಮಂಟಪದ ಮುಂದಿನ ಕಟ್ಟೆ

ಯಮೇಲೆ ನಲಿಯುವ ಪಾರಿವಾಳಗಳನ್ನು ನೋಡಿ ಅವನು ಯಾವಾಗಲೂ ಆನಂದಬಡುತ್ತಿದ್ದ. ತರತರದ ಬಣ್ಣಗಳ "ಕುಹು ಕುಹು" ಸಪ್ಪಳ ಮಾಡುತ್ತಿದ್ದ ಆ ಪಾರಿವಾಳಗಳನ್ನು ಅವನು ನೋಡುತ್ತಿರುವಾಗಲೇ ಒಬ್ಬ ಹುಡುಗ ಮೆಲ್ಲನೆ ಬಂದು ಒಂದು ಪಾರಿವಾಳವನ್ನು ಹಿಡಿದುಕೊಂಡು ಕೆಳಗೆ ಇಳಿದು ಬಂದ. ಅನಂತನು ತಿರುಗಿ ನೋಡಿದ. ಆಚೆಯ ಕಡೆಗೆ ನಿಂತಿರುವ ಮುದುಕಿಯೊಬ್ಬಳು ಅದನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಆ ಪಾರಿವಾಳದ ಮಂದವಾದ ಆಕ್ರಂದನವೂ ರೆಕ್ಕೆಗಳ ಫಡಫಡಾಟವೂ ಅವನಿಂದ ಕೇಳಲಾಗದಾಯಿತು. ಅವನು ಸ್ವಲ್ಪ ಸಿಟ್ಟಿನಿಂದಲೇ ಅಂದ-

"ಬಿಡಬಾರದೇ, ತಾಯೀ, ಆ ಬಡ ಹಕ್ಕಿನ್ನ"

ದುರದುರನೆ ಆತನನ್ನು ನೋಡುತ್ತ ಮುದುಕಿ ಅಂದಳು "ಹಾಂಗಾರ ನನ್ನ ಹುಡುಗನ್ನೇನ ನೀ, ಬದಕಸತೀದ್ಯಾ?" ಆ ಮುದುಕಿಯ ಒಬ್ಬನೇ ಮಗ, ಗಳಿಸಿ ಹೊಟ್ಟೆಗೆ ಹಾಕುವವ, ಸಂಧಿವಾತದಿಂದ ಹಾಸಿಗೆ ಹಿಡಿದ್ದರಿಂದ ಈ ಪಾರಿವಾಳವನ್ನು ಮುದುಕಿ ಒಯ್ಯುತ್ತಿದ್ದಳೆಂದು ಅನಂತನಿಗೆ ತಿಳಿದುಬಂದಿತು. ಆ ಪಾರಿವಾಳದ ಧಡಪಡಿಕೆಯು, ತನ್ನ ಹೃದಯದ ಪ್ರತಿಧ್ವನಿಯೋ ಎಂದು ಅವನಿಗೆ ಕ್ಷಣಮಾತ್ರ ಭಾಸವಾಯಿತು. ಆದರೆ ಮರುಕ್ಷಣವೇ ಆತನ ಔದಾಸ್ಯಮಯವಾದ ಮನಸ್ಸಿಗೆ ಆನಂದವಾಯಿತು. ಆಯುಷ್ಯದಲ್ಲಿ ಪ್ರತಿಯೊಬ್ಬನಿಗೂ ಕಠಿಣವಾದ ಪ್ರಶ್ನೆಗಳನ್ನು ಬಿಡಿಸಬೇಕಾಗುತ್ತದೆ. ಪ್ರಶ್ನೆ ಬಿಡಿಸುವವ ರಾಜಪುತ್ರ ಸಿದ್ಧಾರ್ಥನೂ ಇರಬಹುದು ಅಥವಾ ಕೂಲಿಕುಂಬಳಿಗಳಿಂದ ಹೊಟ್ಟೆ ಹೊರೆಯುವ ಮುದುಕಿಯೂ ಇರಬಹುದು. ಮುದುಕಿಯ ಉತ್ತರವು ಬುದ್ಧನದಕ್ಕಿಂತ ತೀರ ಬೇರೆಯಾಗಿತ್ತು. ಅವಳದೇ ನಿಜವಾಗಿರಬಹುದು. ಇದನ್ನು ಹೇಳುವವರು ಯಾರು?

× × × ×

ತನ್ನ ಇಂಥ ವಿಚಿತ್ರ ಭಾವನೆಗಳೆಲ್ಲ ಪುಟಿದು ಮೇಲಕ್ಕೆ ಬಂದಾಗೆಲ್ಲ ಅವನು ಆ ಮುದುಕಿಯ ವಿಷಯದಲ್ಲಿ ಮನಸ್ಸಿನಲ್ಲಿಯೇ

ವಿಚಾರ ಮಾಡುವ. ಕೆಲ ದಿನ ಈ ಉಪಾಯವು ಒಳ್ಳೆಯದಾಗಿ ನಡೆದರೂ ಕಡೆಗೆ ಮಂತ್ರದಕ್ಕಿಂತಲೂ ಭೂತವೇ ಬಲವತ್ತರವಾಗಿದೆ ಎಂದು ಅನಂತನಿಗೆ ಕಂಡು ಬಂದಿತು. ಆಶೆಯು ಗರ್ಭವತಿಯಾಗಿದ್ದಾಳೆಂದು ತಿಳಿದ ಕೂಡಲೆ ಆತನಿಗೆ ಆನಂದವಾಗಿತ್ತೆಂಬುದರಲ್ಲಿ ಸಂಶಯವಿಲ್ಲ. ಆದರೆ ಮುಂಪೆ ಅವಳಿಗೆ ವಾಂತಿಯಾಗುವದು ಅವನಿಗೆ ನೋಡಲಸಹ್ಯವಾಯಿತು. ಅವಳಿಗೆ ಅನ್ನದ ರುಚಿಯಿಲ್ಲದ ವೇಳೆಯಲ್ಲಿ ತಾನು ಮಾತ್ರ ಮೊದಲಿನಂತೆ ಯಥೇಚ್ಛವಾಗಿ ಊಟ ಹೊಡೆಯಹತ್ತಿರಬೇಕೆಂಬ ವಿಚಾರವು ಬಂದ ಕೂಡಲೆ ಅವನಿಗೆ ಹೇಗೋ ಎನಿಸಿಬಿಡುತ್ತಿತ್ತು. ನಡುನಡುವೆ ಆಶೆಗೆ ಮೈಯಲ್ಲಿ ಸ್ವಾಸ್ಥ್ಯವಿಲ್ಲದಂತಾದ ಕೂಡಲೇಯಂತೂ ಅನಂತನ ಮುಖ ಮುದ್ರೆಯು ಏನೋ ಒಂದು ದೊಡ್ಡ ದೋಷವಾವರಿಸಿದಂತೆ ದೀನವಾಗಿ ಕಾಣುತ್ತಿತ್ತು.

ಆತನ ಈ ದುಃಖಕ್ಕೆ ಆಕೆಯ ಕಣ್ಣುಗಳು ಕಳಸವನ್ನೇರಿಸಿಬಿಟ್ಟವು. ಸ್ವಚ್ಛವಾದ ಸೆಲೆಯ ನೀರು ಕಲುಕಿಹೋದಂತೆ ಅವು ಅವನಿಗೆ ಕಾಣಿಸ ತೊಡಗಿದವು. ಅವಳ ಕಂಣುಗಳ ಸುತ್ತಲೂ ಕರ್‍ರಗಿನ ವರ್ತುಲಗಳು ಕಾಣಿಸಹತ್ತಿದಕೂಡಲೆ ತನ್ನ ಪ್ರೀತಿಯ ಸೌಂದರ್ಯದ ನಾಶವು ಸಮೀಪಿಸಿತೆಂದೇ ಅವನು ಮನವರಿಕೆ ಮಾಡಿಕೊಂಡು ಬಿಟ್ಟ.

ಆಶೆಯು ಸುಖರೂಪವಾಗಿ ಪಾರಾದಳು. ಅನಂತನು ಹುಡಿಗೆಯನ್ನು ಕೈಯಲ್ಲಿ ಎತ್ತಿಕೊಂಡಾಗ, ಅನಪೇಕ್ಷಿತವಾಗಿ ಆಟಿಗೆ ಸಿಕ್ಕಕೂಡಲೆ, ಚಿಕ್ಕ ಮಕ್ಕಳ ಮುಖದ ಮೇಲೆ ಮಿಂಚುವ ಆನಂದ, ಅತನ ಮುಖವ ಮೇಲೆ ಕುಣಿಯುತ್ತಿತ್ತು ಆದರೆ ಕೂಸನ್ನು ತಿರುಗಿ ಆಶೆಯ ಕೈಯ್ಯಲ್ಲಿ ಕೊಡುವಾಗ ಅವಳ ಕಣ್ಣುಗಳನ್ನು ನೋಡಿದ. ಅವು ನಿಸ್ತೇಜವಾಗಿದ್ದವು. ಯಾಕೋ, ಯಾರು ಹೇಳಬೇಕು, ಆತನಿಗೆ ಒಮ್ಮೆಲೆ ತನ್ನ ಮಗನ ಸಲುವಾಗಿ ಆ ಮುದುಕಿಯು ಒಯ್ದ ಪಾರಿವಾಳದ ನೆನಪಾಯಿತು. ಹತ್ತು ದಿವಸ ಪ್ರತಿನಿತ್ಯವೂ ಅವನು ಆಕೆಯ ಬಳಿಯಲ್ಲಿ ಹೋಗುತ್ತಿದ್ದ, ಕೂಸು ಎತ್ತಿ ಕೊಳ್ಳುತ್ತಿದ್ದ, ಅಲ್ಲಿಯ ಇಲ್ಲಿಯ ಹರಟೆ ಹೊಡೆಯುತ್ತಿದ್ದ, ಆದರೆ ಇದೆ

ಲ್ಲವೂ, ಕಾಲಲ್ಲಿ ಮುಳ್ಳು ಮುರಿದಿದ್ದರೂ, ಕವಾಯತಿಯ ಕಾಲದಲ್ಲಿ ಶಿಪಾಯಿಯ ವ್ಯವಸ್ಥಿತವಾದ ಓಡುವಿಕೆಯಂತೆಯೇ ಇತ್ತು.

ಆಶೆಯು ಮನೆಗೆ ಬಂದಳು ಹನ್ನೆರಡನೆಯ ದಿನ ತೊಟ್ಟಿಲಲ್ಲಿ ಹಾಕಿ ಹೆಸರಿಡುವ ಸಿದ್ಧತೆಯೂ ಆಯಿತು. ಗಂಡಹೆಂಡರಿಬ್ಬರೂ ಹುಡಿಗೆಗೆ ಇಡಬೇಕಾದ ಹೆಸರಿಗಾಗಿ ಅಧುನಿಕ ನಾಟಕ ಕಾದಂಬರಿಗಳಲ್ಲಿಯ— ನಾಯಿಕೆಯರ ಹೆಸರುಗಳನ್ನೆಲ್ಲ ಶೋಧಿಸಿನೋಡಿದರು. ಏನು ಮಾಡಿದರೂ ಇಬ್ಬರದೂ ಏಕಮತವಾಗಲೊಲ್ಲದು. ಕಡೆಗೆ ಇಬ್ಬರೂ ತಮ್ಮ ತಮ್ಮ ಹೆಸರಿನ ಚೀಟಿಹಾಕಿ, ಅದರಲ್ಲಿ ಬಂದದ್ದನ್ನು ಇಡಬೇಕೆಂದು ಗೊತ್ತಾಯಿತು. ಆಶೆಯು ಚೀಟಿ ಬರೆಯಹತ್ತಿದಳು. ಅನಂತ ಹುಡಿಗೆಯನ್ನು ಎತ್ತಿಕೊಂಡ. ಆ ಮಗುವಿನ ಕಣ್ಣುಗಳ ಕಡೆಗೆ ದಿಟ್ಟಿಸಿ ನೋಡಿದ ಮಾತ್ರ! ಪ್ರತಿಕ್ಷಣವೂ ಆತನ ಆಶ್ಚರ್ಯ ಹೆಚ್ಚಾಗಹತ್ತಿತು. ಅವನು ಆಶೆಯ ಹತ್ತಿರ ಬಂದು ಕೇಳಿದ "ನೀನು ಹನ್ನೆರಡು ದಿವಸದವಳಿರುವಾಗ ಹೇಗೆ ಕಾಣುತ್ತಿರಬಹುದು?''

"ಹೋಗಿರೀ; ಏನಾದರೊಂದು ನಿಮ್ಮದು!"

"ಇದು ನೋಡು. ಹೀಗೆ! ನೋಡಿದಿಯಾ ಈ ಮುದ್ದಿನ ಕಣ್ಣುಗಳನ್ನ?'' ಅನಂತನು ಆನಂದದಿಂದ ಉದ್ಗಾರ ತೆಗೆದ. ಆ ಕ್ಷಣಕ್ಕೆ ಬುದ್ಧನು ಜೀವಿಸಿದ್ದರೆ, ಆತನ ತತ್ವಜ್ಞಾನವನ್ನು ಖಂಡಿಸುವ ಆ ಎರಡು ಮಾಟಾದ ಮುದ್ದು ಕಣ್ಣುಗಳನ್ನು ನೋಡಲಿಕ್ಕೆ ತಾನು ಅವಶ್ಯವಾಗಿ ಆತನನ್ನು ಕರೆದುಕೊಂಡು ಬರಬಹುದಾಗಿತ್ತೆಂಬ ವಿಚಾರವು ಅವನ ಮನಸ್ಸಿನಲ್ಲಿ ಬರದೇ ಇರಲಿಲ್ಲ. ಅನಂತನು ಕೈಯ್ಯಲ್ಲಿಯ ಕೂಸಿಗೆ ಪಟಪಟನೆ ಮುದ್ದಿಟ್ಟ.

ಆತನ ಕೈಯೊಳಗಿಂದ ಮಗುವನ್ನು ಇಸಿದುಕೊಳ್ಳಲಿಕ್ಕೆ ಕೈ ಮುಂದಕ್ಕೆ ಮಾಡುತ್ತ ಆಶೆಯು ಕೇಳಿದಳು.

"ಈಗ ಇದು ಎರಡನೆ ಹುಚ್ಚು ಹಿಡಿಯಿತು ಕಾಣಸತದ''

“ಛೆ! ಇದು ಮೊದಲಿನದೆ! ಇವಳ ಕಣ್ಣುಗಳು ನಿಜವಾಗಿಯೂ ನಿನ್ನಂತೆಯೇ ಅವೆಯಲ್ಲ!”

“ನನ್ನಂತೆಯೇನೆ?”

ಹೌದೆನ್ನಬೇಕೆಂದು ಅನಂತನು ಆಕೆಯ ಕಡೆಗೆ ನೋಡಿದ. ಆದರೆ ಅವಳ ಕಣ್ಣುಗಳಲ್ಲಿ ಯಾವದೋ ಒಂದು ಬೇರೆ ತರದ ಮೋಹಕತೆ ಕಂಡುಬಂದಿತು. ಕೈಯಲ್ಲಿಯ ಕೂಸಿನ ಕಡೆಗೆ ಅವಳು ವಾತ್ಸಲ್ಯದಿಂದ ನೋಡುತ್ತಿದ್ದಳು. ಸಮುದ್ರದಲ್ಲಿಯ ರತ್ನಗಳೆಲ್ಲವೂ ಇಲ್ಲದಂತಾಗಿ ಅಲ್ಲಿ ಲಕ್ಷ್ಮಿಯನ್ನೇ ಕಂಡಂತೆ ಅಥವಾ ಆಕಾಶದಲ್ಲಿಯ ತಾರೆಗಳ ತೇಜವೆಲ್ಲವೂ ಲೋಪವಾಗಿ ಅಲ್ಲಿ ಬೆಳದಿಂಗಳೇ ಆರಳಿದಂತೆ ಅವನಿಗೆ ಭಾಸವಾಯಿತು.

ಆಕೆಯನ್ನು ಮೊದಲನೆಯ ಸಾರೆಯೇ ನೋಡುತ್ತಿರುವಂತೆ ಅನಂತ ಆನಂದದಲ್ಲಿ ಉದ್ಗಾರ ತೆಗೆದ.

“ಕಣ್ಣುಗಳಲ್ಲಿ ಅನಂತ ಪ್ರಕಾರಗಳಿವೆ ಎಂಬುದೇ ನಿಜ?”

---

# ರಾತ್ರಿಯು ದಿವಸವಾದರೆ........



ವರಳಿಯಲ್ಲಿಯ ಸಮುದ್ರದ ದೃಶ್ಯ ಮತ್ತು ಅದರ ದಡವಲ್ಲಿಯೇ ನಿಂತ ಕಾಂಗ್ರೇಸ ನಗರದಲ್ಲಿ ನೆರೆದ ಜನಸಮುದ್ರದ ದೃಶ್ಯ ಇವೆರಡನ್ನೂ ನೋಡಿ ನನ್ನ ಮನಸ್ಸಿನಲ್ಲಿ ವಿಚಿತ್ರವಿಚಾರಗಳು ತಲೆದೋರಿದವು. ಸಮುದ್ರದಲ್ಲಿ ಮುತ್ತು ರತ್ನಗಳಿರುವಂತೆ ಶಂಖ ಸಿಂಪುಗಳೂ ಇರುವವು. ರಾಷ್ಟ್ರೀಯ ಸಭೆಯ ಅಧಿವೇಶನದ ನಿಮಿತ್ತವಾಗಿ ನೆರೆದ ಆ ಜನಸಮುದಾಯಲ್ಲಿ ಅನೇಕ ತರದ ಜನರೂ ಇದ್ದೇ ಇರುವರು. ಸಮುದ್ರದಲ್ಲಿ ಎಷ್ಟೋ ಜಾತಿಯ ಮೀನಗಳಿರುವಂತೆ ಆ ಜನಸಮುದ್ರದಲ್ಲಿ ಕೇವಲ ನನ್ನ ಗುರುತಿನ ಜನರ ವರ್ಗೀಕರಣಮಾಡಿದರೂ ಕೂಡ ಸುಖಾಭಿಲಾಷಿಗಳು, ಲಬ್ಧಪ್ರತಿಷ್ಠಿತರು, ಬೇಕಾದ ಕೆಲಸವನ್ನು ಮಾಡಬಲ್ಲವರು ಈ ತೆರವ ತರತರದ ಮೂರ್ತಿಗಳು ಅಲ್ಲಿ ಸಿಕ್ಕುವಂತಿತ್ತು!

ಆದರೆ ಈ ಸಂದಣಿಯಲ್ಲಿ ನನ್ನ ಶಾಲೆಯ ಗೆಳೆಯ ಮಾಧವ ದೇಸಾಯಿಯನ್ನು ದೂರದಿಂದ ನೋಡಿದ ಮಾತ್ರಕ್ಕೆ ನನಗೆ ಆಶ್ಚರ್ಯವಾಯಿತು. ವಿಮಾಕಂಪನಿಯ ಏಜಂಟ ರಾಷ್ಟ್ರೀಯ ಸಭೆಗೆ ಬರುವ! ಹಾಗಾದರೆ ಭಿಕ್ಷೆಬೇಡುವವನು ರಣಾಂಗಣಕ್ಕೇಕೆ ಹೋಗಬಾರದು? ಮತ್ತು ಕಮ್ಮಾರನು ಸಂಗೀತ ಪರಿಷತ್ತಿನ ಸಭಾಸದನೇಕೆ ಆಗಬಾರದು.?

ನಾವು ಒಬ್ಬರೊಬ್ಬರನ್ನು ನೋಡಿದೆವು. ಅವನು ಸಮೀಪಕ್ಕೆ ಬಂದೊಡನೆಯೇ ನಮಸ್ಕಾರ ಮಾಡಿ ನಸುನಕ್ಕ. ನಾನು ಚೇಷ್ಟೆಯ ಸ್ವರದಲ್ಲಿ ಅಂದೆ "ಏನು, ಮಾಧವರಾವ? ನಿಮ್ಮ ವ್ಯವಸಾಯಕ್ಕೇನೂ ಇದು ಅನುಕೂಲ ಕ್ಷೇತ್ರವಲ್ಲ!"

"ಅದೇಕೆ? ಸಾವಿರಾರು ಜನರು ಕೂಡಿರುವರಲ್ಲ ಇಲ್ಲಿ?"

"ಬತ್ತಲೆ ತಿರುಗಾಡುವ ಫಕೀರರ ದೇಶದಲ್ಲಿ ಜವಳೀ ವ್ಯಾಪಾರಿಗೆ ಸಿಗುವದು ದಿವಾಳಿಯೆ!"

ಮಾಧವನು ಸುಮ್ಮನೆ ನಕ್ಕನಷ್ಟೇ! ಇವನು ರಾಷ್ಟ್ರೀಯ ಸಭೆಯದೇ ವಿಮೆಯನ್ನು ಇಳಿಸಲಿಕ್ಕೆ ಬಂದಿರುವನೋ ಏನೋ ಎಂಬ ಸಂಶಯವು ಮನಸ್ಸಿನಲ್ಲಿ ಬಂದು ಹೋಯಿತು.

ಏನಾದರೊಂದು ಮಾತಾಡಬೇಕೆಂದು ನಾನಂದೆ "ನಿನ್ನಂಥವರಂತೂ ಬಹಿಷ್ಕಾರ ಹಾಕಲೇಬೇಕು ರಾಷ್ಟ್ರೀಯ ಸಭೆಯ ಮೇಲೆ"

"ಅದು ಯಾಕಪ್ಪ?"

"ಅದು ಸಾವಕಾಶವಾಗಿ ಸಮಾಜವಾದದ ಕಡೆಗೆ ಹೊರಟಿದೆಯ ಲ್ಲವೇ?"

"ಹೊರಡಲೊಲ್ಲದೇಕೆ! "

"ವಾಃ! ಈ ಸಮಾಜವಾದವೆಂದರೆ ನಿನ್ನ ಹೊಟ್ಟೆಯ ಮೇಲೆ ಕಾಲು! ತಮ್ಮ ಹಿಂದೆ ಹೆಂಡಿರು ಮಕ್ಕಳ ವಿಷಯದಲ್ಲಿ ಯಾರಾದರೂ ಕಾಳಜೀಮಾಡುವವರು ಇರುವರೆಂದು ಒಮ್ಮೆ ಜನಕ್ಕೆ ತಿಳಿಯಲಿ! ಅಲ್ಲಿಂದ ಯಾರು ಇಳಿಸುವರು ನಿನ್ನ ಈ ವಿಮೆಯನ್ನು? ಮತ್ತು—"

"ಇಳಿಸದಿದ್ದರೆ ಬಿಡಲೊಲ್ಲರೇಕೆ, ಸಮಾಜ ತೆಗೆದುಕೊಳ್ಳುವದು, ನಮ್ಮ ಸಮಾಚಾರವನ್ನು!"

ಆತನ ಉತ್ತರವು ಸಮರ್ಪಕವಾಗಿತ್ತು. ಆದರೆ "ಕಲ್ಲೆಣ್ಣೆ ಮಾರು ವವನಿಗೆ ರಾತ್ರಿಯು ದಿವಸವಾದದ್ದು ಸೇರಬಹುದೇ? ಇಪ್ಪತ್ತುನಾಲ್ಕು ತಾಸು ದಿವಸವೇ ಆಗಿಬಿಟ್ಟರೆ, ದೀಪ ಯಾರಿಗೆ ಬೇಕಾಗಬಹುದು? ಮತ್ತು ಕಲ್ಲೆಣ್ಣೆಕೊಂಡುಕೊಳ್ಳುವವರಾದರೂ ಯಾರು?

"ಇಪ್ಪತ್ತುನಾಲ್ಕು ತಾಸಿನ ದಿವಸವಾದರೆ, ಅಂಗಡಿಕಾರನ ಸ್ವತಃದ ಕಲ್ಲೆಣ್ಣೆಯು ಖರ್ಚಾದರೂ ಉಳಿದೇ ಬಿಟ್ಟಿತಲ್ಲ!"

ಸವಾರಿಯು ಸಾಮಾನ್ಯ ಗುರುವಿನ ಶಿಷ್ಯನಲ್ಲವೆಂದು ತಿಳಿದು ಕೊಂಡು ಆತನನ್ನು ಮನಮುಟ್ಟಿ ಕೇಳಿದೆ "ನಿಜವಾಗಿಯೂ ಸಮಾಜ ವಾದಕ್ಕೆ ನಿನ್ನ ಒಪ್ಪಿಗೆ ಇದೆಯೋ?"

"ನಿಜವಾಗಿಯೂ ಇದೆ."

"ನೀನು ಅದರ ವಿಷಯದಲ್ಲಿ ಏನು ಓದಿರುವಿ? ಮಾರ್ಕ್ಸ, ಲೆನಿನ್—"

"ಇವೆಲ್ಲ ಹೆಸರುಗಳನ್ನು ಕೇಳಿರುವೆ ಮಾತ್ರ! ವಿಮಾಕಂಪನಿಯು ತುಂಬಿದ ಫಾರ್ಮು, ಮತ್ತು ಹೆಂಡತಿಯ ಪತ್ರ, ಇವೆರಡರ ಹೊರತಾಗಿ ನಾನು, ವಿಶೇಷವಾಗಿ ಏನೂ ಓದುತ್ತಿರುವದಿಲ್ಲ!"

ನಾನು ಆಶ್ಚರ್ಯದಿಂದ ಆತನ ಕಡೆಗೆ ನೋಡತೊಡಗಿದೆ.

ಅವನು ಹೇಳಿದ. "ಇದರಲ್ಲೇನಿದೆ ಅಷ್ಟು ಆಶ್ಚರ್ಯಪಡುವಂತ ಹದು? ನೀನು ಗಾಂಧಿಯ ಚಳವಳಿಯಲ್ಲಿ ಸೇರಿಕೊಂಡು, ದೊಡ್ಡ ದೊಡ್ಡ ವ್ಯಾಖ್ಯಾನ ಹೇಳುವವನೆಂದು ಹೆಸರು ಪಡೆದುಕೊಂಡಿ, ಸಮಾಜವಾದದ ವಿಷಯದಲ್ಲಿ ಮಾತಾಡಹತ್ತಿದಿ—"

ನನ್ನ ವ್ಯಾಖ್ಯಾನಗಳನ್ನು ಓದಿಕೊಂಡೇ ಮಾಧವನು ಸಮಾಜವಾದಕ್ಕೆ ಒಪ್ಪಿಕೊಂಡಂತೆ ತೋರುತ್ತಿತ್ತು. ಅಲ್ಲಿ ಮತ್ತೆ ಯಾರೂ ಇರದಿದ್ದರೆ, ಆ ಕ್ಷಣಕ್ಕೆ ನನ್ನ ಬೆನ್ನು ನಾನೇ ಚಪ್ಪರಿಸಿಕೊಳ್ಳುತ್ತಿದ್ದೆ!

ಮಾಧವನು ಮುಂದೆ ಹೇಳಿದ. "ಪುಸ್ತಕಗಳು ಹತ್ತು ವರ್ಷಗಳಲ್ಲಿ ಕಲಿಸಬಹುದಾದ್ದನ್ನು ಒಂದೇ ಕ್ಷಣದಲ್ಲಿ ಕಲಿಸಿಬಿಡುವಂತಿದೆ. ಡಾಯರೆಕ್ಟ ಮೆಥಡ್ ಅದೆ ಅದು?

"ಎಂತಹದು ಅದು?"

"ಅನುಭವದ್ದು!"

"ಅನುಭವವೇ? ಯಾರದು ಅನುಭವ?"

ಆತನ ಕಂಪನಿಯಲ್ಲಿಯ ವರಿಷ್ಠರು ಆತನನ್ನು ಒಳ್ಳೇ ರೀತಿಯಿಂದಯಾಗಿ ನಡಿಸಿಕೊಂಡಿರಲಿಕ್ಕಿಲ್ಲವೆಂದೆನಿಸಿತು ನನಗೆ!

"ಅದೊಂದು ಸತ್ಯಕಥೆಯೇ ಅದೆಯಪ್ಪ! "ಒಬ್ಬ ಪೋಲೀಸ, ಮತ್ತು ಅವನ ಸಾಹೇಬ" ಇದು ಆ ಕಥೆಯ ಹೆಸರು! ಥೇಃ, ಹೇಸರೇನೂ ಅಷ್ಟು ಚನ್ನಾಗಿ ಸಾಧಿಸಿಲ್ಲ ನೋಡು. ಕಥೆಯ ಹೆಸರು ಹಳೆಯ ಕಾಲದ್ದಾಗಿದೆ!

ಇಲ್ಲದಿದ್ದರೆ ಈಗಿನ ಕಾಲದಲ್ಲಿ—ವನ್ ಪೋಲೀಸ ಮತ್ತು ತಸ್ಯಸಾಹೇಬ ಹೀಗೆ—''

"ಸಾಹೇಬನು ಆ ಪೋಲೀಸನಿಗೆ ದುಷ್ಟ ರೀತಿಯಿಂದ ನಡಿಸಿಕೊಂಡನೇನು?''

"ಉಹುಂ"

"ಅಲ್ಲಿಂದ?"

"ಹೇಳುವೆ ನಡಿ ಸಮುದ್ರದ ಕಡೆಗೆ. ನನ್ನ ಸಮಾಜವಾದದ ಮೂಲ—"

× × × ×

ಅವರಿಬ್ಬರು ಒಂದೆಡೆಗೆ ಹೋಗಿ ಕುಳಿತರು. ಅದೇ ಸೂರ್ಯಾಸ್ತವಾಗಿತ್ತು. ನೀರಿನ ಮೇಲೆಯೂ, ಆಕಾಶದಲ್ಲಿಯೂ ಇಡೀ ವಾತಾವರಣದಲ್ಲಿಯೂ ಕೃಷ್ಣವರ್ಣದ ಛಾಯೆಯು ಕುಣಿಯಲಾರಂಭಿಸಹತ್ತಿತ್ತು. ಸಮುದ್ರದ ಸಪ್ಪಳವು ತಾಯಿಗೆ ಹಸಿದ ಮಗುವು ಕೊಡುವ ತೊಂದರೆಯಂತಿತ್ತು. ಬೆರಳುಗಳಿಂದ ಉಸುಕಿನಲ್ಲಿ ಆಟವಾಡುತ್ತಲೇ ನಾನು ಮಾಧವನ ಕಥೆಯನ್ನು ಕೇಳತೊಡಗಿದೆ.

"ನಮ್ಮ ಈ ವ್ಯವಸಾಯಕ್ಕೆ ಮೂಲಪುರುಷನೆಂದರೆ ನಾರದನ ಮಗ-"

"ಎಲೋ ಗೃಹಸ್ಥಾ, ನಾರದನು ಬ್ರಹ್ಮಚಾರಿಯಾಗಿದ್ದನೋ!—"

"ನಾರದನ ದತ್ತಕ ಮಗನೆಂದುಕೋ ಬೇಕಾದರೆ! ವಂಶವೃಕ್ಷದ ಬೇರು ಗಡ್ಡೆಗಳೆಲ್ಲವೂ ಹೀಗೆ ಇರುತ್ತವೆಂದೇ, ನಾವು ವಿಮಾ ಕಂಪನಿಯ ಏಜಂಟರು ಎಲ್ಲಿ ಬೇಕಾದಲ್ಲಿ ಹೋಗುವೆವು—"

"ಮತ್ತು ಈ ವಿಮೆಯ ವ್ಯವಸಾಯದ ಕೀರ್ತನವನ್ನು ಮಾಡುವೆವು. ಅಲ್ಲವೆ?'' ಸ್ವಲ್ಪ ನಕ್ಕು ಮಾಧವ ಮುಂದಕ್ಕೆ ಸಾಗಿದ. "ಹೀಗೆಯೇ ತಿರುಗಾಡುತ್ತ ಒಂದು ದಿವಸ ಒಂದು ಜಿಲ್ಹಾ ಪೋಲೀಸ ಕಚೇರಿಯಲ್ಲಿ ಹೋದೆ. ಹೋದದ್ದಕ್ಕೆ ಸಾರ್ಥಕವಾಗಿ ಎರಡು ಬೇಟಿ ಸಿಕ್ಕೇ ಬಿಟ್ಟವು. ಮೊದಲನೇ ಬೇಟಿ ಒಬ್ಬ ಪೋಲೀಸನದು, ಎರಡನೆಯದು ಆ ಪೋಲೀಸನ ಸರ್ವಶ್ರೇಷ್ಠ ವರಿಷ್ಠನದು!

"ಕೆಳಗಿನ ಅಂತಸ್ತಿನಿಂದ ಒಮ್ಮೆಲೆ ಉಪ್ಪರಿಗೆಗೇ ಹಾರಿದಿ ಎನ್ನಬೇಕು!"

"ಆ ಪೋಲೀಸನ ಮನವಲಿಸಬೇಕಾದರೆ ನನಗೆ ಸಾಕು ಸಾಕಾಗಿ ಹೋಯಿತು. ಅವನ ಹೆಂಡತಿಗೆ ಉಂಟಾದ ಜ್ವರದ ಉಪಯೋಗವನ್ನು ಆಗ್ಗೆ ಒಳ್ಳೇ ಚನ್ನಾಗಿ ಮಾಡಿಕೊಂಡು ಬಿಟ್ಟೆ. "ಎಲೋ ಇಂಥ ಸದೃಢಳಾದ ಸಶಕ್ತಳಾದ ನಿನ್ನ ಹೆಂಡತಿ, ಬೇನೆಬಿದ್ದಳೋ ಇಲ್ಲವೋ? ಅಂದ ಮೇಲೆ ನಿನ್ನದಾದರೂ ಏನು ನಿಯಮ?" ಇಂಥ ಎಷ್ಟೋ ಪ್ರಶ್ನೆಗಳೊಂದಿಗೆ ನಾನು ಅವನ ಮೇಲೆ ಸಾಗಿಹೋದೆ. ಕಡೆಗೆ ಬಡತನದಿಂದ ಗಟ್ಟಿಯಾಗಿದ್ದ ಆತನ ಮನಸ್ಸಿನ ಪಡದೆಗೆ ಸಾವಕಾಶವಾಗಿ ಛಿದ್ರಗಳು ಬೀಳತೊಡಗಿದವು. ಕೊನೆಗೆ, ಪಾಪ! ಐದು ನೂರು ರೂಪಾಯಿಯ ವಿಮೆ ಇಳಿಸಲಿಕ್ಕೆ ಒಪ್ಪಿದ."

"ಆ ಸಾಹೇಬ ಎಷ್ಟರದು ಇಳಿಸಿದ?"

"ಐದು ಸಾವಿರದ್ದು! ಆತನಿಗೇನೂ ಬಹಳ ಹೇಳಬೇಕಾಗಲಿಲ್ಲ. ನನ್ನ ಕೂಡ ಮಾತಾಡುವ ಮುಂದೆ ಮಾತ್ರ ಸಾಹೇಬರಿಗೆ ಬಹಳ ಶ್ರಮವಾಗುತ್ತಿದ್ದಂತೆ ತೋರುತ್ತಿತು. ನಡುನಡುವೆ ಕೆಮ್ಮು ಬರುತ್ತಿತ್ತು. ನಾನು ಮನಸ್ಸಿನಲ್ಲಿಯೇ ಅಂದುಕೊಂಡೆ-- ಈ ಅಮಲದಾರನಿಗೆ ಆ ಪೋಲೀಸನಿಗಿಂತ ಹೆಚ್ಚು ಪಗಾರ ದೊರೆಯುವದೆಂದು ನಾನಿಷ್ಟು ಚಡಪಡಿಸುವದು? ಎಷ್ಟು ಕಷ್ಟ ಸಹಿಸುತ್ತಿರಬೇಕು ಈ ಗೃಹಸ್ಥ. ಖೂನಿ, ದರೋಡೆ, ರಾಜಕೀಯ ಚಳವಳಿ—ಒಂದಲ್ಲ ಎರಡಲ್ಲ ಸಾವಿರಾರು ಗೊಂದಲ! ಆತನ ಮುಖಚರ್ಯೆಯ ಮೇಲಿಂದ ಆತನಿಗೆ ಬಹಳ ಜಾಗರಣೆಯಾಗಿರಲಿಕ್ಕೆಬೇಕೆಂದು ಕಂಡು ಬರುತ್ತಿತ್ತು!" ನಾನು "ಇದೊಳ್ಳೇ ಸಮಾಜವಾದ! ಜಾಗರಣೆಯು ವ್ಯಸನಗಳ ಮೂಲಕವಾದರೂ ಸಂಭವಿಸುವದುಂಟು" ಎಂದುಕೊಂಡೆ.

ಆದರೆ ಮಾಧವನ ಲಕ್ಷ್ಯವು ನನ್ನ ಕಡೆಗಿರಲಿಲ್ಲ. ಅವನು ಹಾಗೆಯೇ ನೇರವಾಗಿ ಹೇಳುತ್ತಲೇ ಇದ್ದ. "ಆ ವರಿಷ್ಠನ ಸವಾರಿಯು ಸುಮ್ಮನೆ

ಹೆಸರಿಗೆ ಕಚೇರಿಗೆ ಬಂದಿತ್ತು. ಅತ್ತಿತ್ತ ಸ್ವಲ್ಪ ತಿರುಗಾಡಿ ನೋಡಿ ನಾನು ಅಲ್ಲಿರುವಾಗಲೇ ಸಾಹೇಬರು ಮನೆಯ ಕಡೆಗೆ ಹೋಗಿ ಬಿಟ್ಟರು."

"ಇತ್ತ ಮನೆಯಲ್ಲಿ ಹೆಂಡತಿ ಬೇನೆಯಿಂದ ನರಳುತ್ತ ಬಿದ್ದಿದ್ದರೂ ಕೂಡ ಆ ಪೋಲೀಸನಿಗೆ ಮನೆಗೆ ಹೋಗಲಿಕ್ಕೆ ಸಿಗಲಿಲ್ಲ!"

"ನಿನ್ನ ಈ ಸಮಾಜವಾದದ ಮೂಲವು ನದಿಯ ಮೂಲಕ್ಕಿಂತಲೂ ಸೂಕ್ಷ್ಮವಾಗಿದ್ದಂತೆ ತೋರುತ್ತದೆ."

"ಒಂದು ಸ್ವಲ್ಪ ನಾನು ಹೇಳುವದನ್ನಾದರೂ ಕೇಳುವಿಯೋ ಇಲ್ಲವೋ? ಆ ಮೇಲೆ ಬಂದಿತು ಡಾಕ್ಟರ ಪರೀಕ್ಷೆಯ ಪ್ರಶ್ನೆ. ಡಾಕ್ಟರನೇ ಮನೆಗೆ ಬಂದು ಹೋಗಬೇಕೆಂದು ಅಮಲದಾರರು ಚೀಟಿ ಕಳುಹಿದರು. ಸಾಹೇಬರ ಕೋಣೆಯೊಳಗಿನ ವಸ್ತುಗಳ ಮೇಲಿಂದ ಅಲ್ಲಿ ಯಾರಾದರೂ ಬೇನೆಯುವರು ಇರಬೇಕೆಂದು ತಿಳಿಯುವಂತಿತ್ತು. ಅಲ್ಲಿಯ ಬಿಸಿ ನೀರಿನ ಚೀಲ, ತಟ್ಟೆಯಲ್ಲಿಯ ಮೋಸಂಬೀ ಹಣ್ಣುಗಳು—ತಪಾಸಣಿಯ ಕಾಲದಲ್ಲಿ ನಾನು ಹೊರಗೇ ಕುಳಿತಿದ್ದೆ. ಡಾಕ್ಟರರು ಹೊರಗೆ ಬಂದು ಹೇಳಿದರು "ಏನೂ ಅಡ್ಡಿಯಿಲ್ಲ. ಎಲ್ಲವೂ ಚನ್ನಾಗಿದೆ. ಆ ಪೋಲೀಸ ಸಿಪಾಯಿಯನ್ನಾದರೂ ಇಲ್ಲಿಗೆ ಕರಿಸಿರುವಿರಲ್ಲವೆ?''

ಆತನಲ್ಲಿ ಏನು ದೋಷ ಸಿಗಬೇಕಾಗಿತ್ತು? ನನಗೆ ಅಂಜಿಕೆಯಿತ್ತು, ಅಮಲ್ದಾರರ ವಿಷಯದಲ್ಲಿಯೇ. ಆದರೆ ಡಾಕ್ಟರರು ಆ ಸಿಪಾಯಿಯ ಕಣ್ಣುಗಳನ್ನು ನೋಡಿ "ಕಣ್ಣುಗಳ ಸುತ್ತಲೂ ಹೀಗೇಕೆ ಕಪ್ಪಾಗಿದೆ? ನಿನ್ನ ಮೈಯ್ಯಲ್ಲಿ ರಕ್ತ ಕಡಿಮೆಯಾದಂತೆ ಕಾಣಿಸುತ್ತದೆ?" ಎಂದು ಕೇಳಿದರು

ಅದು ಹೆಂಡತಿಯ ಬೇನೆಯ ಮೂಲಕ ದಿನಾಲು ಮಾಡಬೇಕಾದ ಜಾಗರಣೆಯ ಪರಿಣಾಮವಾಗಿತ್ತೆಂಬುದು ಸ್ಪಷ್ಟವಿತ್ತು. ಅದರಂತೆ ಅವರಿಗೆ ಹೇಳಿ ಬಿಟ್ಟೆ. ಆಗ್ಗೆ ಡಾಕ್ಟರರು, ಅಂದರು "ಕಂಪನಿಯ ಹಿತವನ್ನು ಚನ್ನಾಗಿಯೇ ಬಯಸುವಿರಲ್ಲ. ಇಲ್ಲಿ ನೋಡಿರಿ ಈತನ ಹಲ್ಲುಗಳನ್ನು! ಎಲ್ಲವೂ ಹುಳತು ಹೋಗಿವೆ. ಪಾಯೋರಿಯಾ ಆದರೂ— ಪಾಯೋ

ರಿಯಾ ಅಂದರಂತೂ ಎಲ್ಲ ರೋಗಿಗಳಿಗೆ ಮೂಲ. ಅಗದೀ ಇತ್ತೀಚಿನ ಶೋಧವು ಇದು! ವೇಳೆ ಬಂದರೆ ಸಂಧಿವಾತವೂ ಆಗಬಹುದು; ಅರ್ಧಾಂಗವಾಯುವಾದರೂ ಆಗಬಹುದು– ”

ಪಾಯೋರಿಯಾದಿಂದ ಪ್ಲೇಗವಾದರೂ ಆಗಬಹುದೆಂದು ಹೇಳುವದು ಡಾಕ್ಟರರ ವಿಚಾರವಿದ್ದಿತೋ, ಏನೊ? ಯಾರು ಬಲ್ಲರು? ಪಾಪ. ಆ ಬಡ ಪೋಲೀಸನು ಮಾತ್ರ ಆ ಡಾಕ್ಟರನ ಶೋಧ ಕೇಳಿ ಗಾಬರಿಯಾದ. ಅಷ್ಟರಲ್ಲಿಯೇ ಡಾಕ್ಟರರು ಆತನ ನಾಡೀಪರೀಕ್ಷೆ ಮಾಡುತ್ತ “ನಾಡಿಯಾದರೂ ಸ್ವಲ್ಪ ವೇಗವಾಗಿಯೂ ನಡಿಯುವದು. ಏನೋ? ನಿನಗೆ ಮೇಲಿಂದಮೇಲೆ ಜ್ವರ ಗಿರ ಬರುತ್ತವೆಯೋ ಏನು?”

ಡಾಕ್ಟರನ ವಿಷಯದಲ್ಲಿ ನನಗೆ ಮನಸ್ವಿಯಾಗಿ ಸಿಟ್ಟು ಬಂದಿತು. ಆ ಬಡ ಪೋಲೀಸನ ಪೂರ್ವಜನ್ಮದ ಶತ್ರುವಾಗಿದ್ದನೋ ಏನೋ ಅವ! ಕಡೆಗೆ ಡಾಕ್ಟರ ನನ್ನ ಕಡೆಗೆ ತಿರುಗಿ ಹೇಳಿದ- “ಕೇವಲ ನಿಮ್ಮ ಸಲುವಾಗಿ ಪಾಸು ಮಾಡಿದ್ದೇನೆ. ಇಲ್ಲದಿದ್ದರೆ ಈ ಕೇಸು—”

ಕಥೆ ಮುಗಿಯಿತೆಂದು ತಿಳಿದು ನಾನಂದೆ “ಅಮಲ್ದಾರರು ಒಂದೆರಡು ನೋಟುಗಳಿಂದ ಡಾಕ್ಟರನ ಕೈ ಬೆಚ್ಚಗೆ ಮಾಡಿರಬೇಕಷ್ಟೆ. ಚಾರುದತ್ತನಿಗೆ ಬಿದ್ದ ಪ್ರಶ್ನೆ ಅಷ್ಟೇನು ಸರಳವಾದದ್ದಲ್ಲ. ಮರಣಲೇಸೋ, ದಾರಿದ್ರ್ಯ ಲೇಸೊ?”

“ಕಥೆಮುಗಿಯುವ ಪೂರ್ವದಲ್ಲಿಯೇ ಹೀಗೆ ತಾತ್ಪರ್ಯ ಹೇಳಬೇಡ. ಲಘು ಕಥೆಯ ತತ್ವಕ್ಕೆ ಅದು ಸರಿಯಾಗುವದಿಲ್ಲ!

ನಾನು ನಗುನಗುತ್ತ ಕೇಳಹತ್ತಿದೆ. ಆ ನಸುಗತ್ತಲೆಯಲ್ಲಿ ತೆರೆಗಳ ಅಸ್ಪಷ್ಟ ಸಪ್ಪಳವು ಇಡೀ ಪ್ರಪಂಚದಲ್ಲಿಯ ಬಡಬಗ್ಗರ ಆಕ್ರಂದನದ ಪ್ರತಿಧ್ವನಿಯಂತೆ ದೂರಿನಿಂದ ಕೇಳಬರುತ್ತಿತ್ತು!

ಮಾಧವನು ಹೇಳತೊಡಗಿದ— ಮುಂದೆ ಮತ್ತೆ ಎರಡು ಮೂರು ವಾರಗಳ ನಂತರ ಮತ್ತೇನಾದರೂ ಗಿರಾಕಿ ಸಿಕ್ಕರೆ ನೋಡಬೇಕೆಂದು ಆ ಊರಿಗೆ ಹೋದಾಗ ಸಹಜ ಆ ಪೋಲೀಸ ಕಚೇರಿಯ ಕಡೆಗೆ ಹೋದೆ.

ಅಲ್ಲಿ ಪೋಲೀಸನೂ ಇಲ್ಲ. ಅಮಲ್ದಾರರೂ ಇಲ್ಲ. ಅವರಲ್ಲಿ ವಿಷಯದ ವಿಚಾರಿಸಲಾಗಿ ಸಾಹೇಬರು ಇತ್ತೀಚೆಗೆ ಕ್ಷಣಮಾತ್ರ ಕಚೇರಿಗೆ ಬಂದು ಹೋಗುತ್ತಿರುವರೆಂಬುದನ್ನು ಕೇಳಿ ನನ್ನ ಮನಸ್ಸಿನಲ್ಲಿ ಯಾವದೋ ಒಂದು ಸಂಶಯವು ಸುಳಿದುಹೋಯಿತು, ಪೋಲೀಸನಂತೂ ಬೇನೆ ಬಿದ್ದಿರುವನೆಂದು ತಿಳಿದು ಬಂದಿತು.

ನನಗೆ ಆಶ್ಚರ್ಯವಾಯಿತು. ನಾನು ಕೇಳಿದೆ "ಏನಾಗಿದೆ ಅವನಿಗೆ?!

"ಆಗುವದೇನು? ಆತನ ಹೆಂಡತಿ ಬೇನೆ ಬಿದ್ದಿರುವಳಲ್ಲ."

"ಹೀಗೇನು? ಹಾಗಾದರೆ ಅವನು ಹೋದ ತಿಂಗಳೆಲ್ಲ ರಜೆಯ ಮೇಲೆಯೇ ಇದ್ದನೆನ್ನಬಾರದೇ?"

"ಕೇವಲ ರಜೆಯ ಮೇಲೆಯೇ ಯಾಕೆ? 'ಬೇನೆಯ ರಜೆಯ ಮೇಲೆ ಇದ್ದಾನೆ!"

"ಅಂದರೆ?"

"ಇಷ್ಟು ದಿವಸಗಳವರೆಗೆ ಸಿಪಾಯಿಗೆ ಸಾದಾ ರಜೆಯನ್ನು ಕೊಡುವವರಾರು? ಕಡೆಗೆ ಎಲ್ಲಿಂದಲೋ ಒಂದು ಡಾಕ್ಟರ ಸರ್ಟಿಫಿಕೇಟು ಸಂಪಾದಿಸಿ ರಜೆ ಪಡೆದುಕೊಂಡ! ಮೊದಲಾದರೂ ಅವನು ಹೀಗೆಯೇ ರಜೆ ತೆಗೆದುಕೊಳ್ಳುತ್ತಿದ್ದ!"

"ನಾನು ಮತ್ತೆ ಪರವೂರಿಗೆ ಹೋದೆ. ಸುಮಾರು ಎರಡು ತಿಂಗಳುಗಳವರೆಗೂ ನನಗೆ ತಿರುಗಿ ಬರುವದಾಗಲಿಲ್ಲ. ತಿರುಗಿ ಬಂದ ಮೇಲೆ ಎರಡೂ ಕುಳಗಳು 'ನಿಕಾಲ' ಆದವೆಂದು ತಿಳಿದು ಬಂದಿತು"

'ಆ ಪೋಲೀಸ ಯಾತರಿಂದ ತೀರಿದ?"

"ಹೆಂಡತಿಯ ಟಾಯಫಾಯಿಡ್ ಅಂಟಿಕೊಂಡಿರಬೇಕು ಆತನಿಗೆ. ತೊಂಭತ್ತೊಂದು ದಿವಸ ಜ್ವರ ಬಂದರೂ ಅವಳು ಬದುಕಿದಳು. ಅವನಿಗೆ ಮಾತ್ರ ೮—೧೦ ದಿವಸಗಳಲ್ಲಿಯೇ ಅಪ್ಪಣೆಯಾಯಿತು."

"ಮತ್ತು ಅಮಲ್ದಾರರು ಯಾವ ದೈವದುರ್ವಿಪಾಕದಿಂದ ದಿವಂಗತರಾದರೆನ್ನಬೇಕು?"

“ ‘ಮೆನೆಂಜಾಯಿಟಿಸ್‌ನಿಂದ’ ಎಂದು ಕಚೇರಿಯ ರಿಕಾರ್ಡಿನಲ್ಲಿ ಬರೆಯಲ್ಪಟ್ಟಿದೆ. ಆದರೆ ನನಗನಿಸುವದು, ಅವರಿಗೆ ಕ್ಷಯವಿರಲೇಬೇಕೆಂದು!”

“ಮುಗಿಯಿತಲ್ಲವೆ ನಿನ್ನ ಕಥೆ? ಒಳ್ಳೇ ಎರಡು ಪಾತ್ರಗಳು ನೆಲ ಕ್ಕುರುಳಿದವಲ್ಲ! ಅಥವಾ ಆ ಡಾಕ್ಟರನೊಬ್ಬನನ್ನು ಹಾದೀ ಹಿಡಿಸಬೇಕೆನ್ನುವಿಯೋ?”

“ಇಬ್ಬರ ಹೆಂಡಂದರಿಗೂ ವಿಮೆಯ ಹಣವನ್ನು ದೊರಕಿಸಿಕೊಡುವ ವ್ಯವಸ್ಥೆಯನ್ನು ನಾನೇ ಮಾಡಿದೆ. ಸಾಹೇಬರ ಹಣವು ಮಾತ್ರ ಯಾವ ತಕರಾರು ಇಲ್ಲದೆ ಸಿಕ್ಕು ಹೋಯಿತು. ಆ ಪೋಲೀಸನ ಹೆಂಡತಿಗೆ ಮಾತ್ರ—”

“ ಅವಳದೇನಾಯಿತು?

“ ವಿಮೆಯನ್ನಿಳಿಸಿದ ದಿವಸದಿಂದ ಅವನು ಕಚೇರಿಯಲ್ಲಿ ಬೇನೆಯ ಮೂಲಕವೆಂದು ರಜೆ ತೆಗೆದುಕೊಂಡಿದ್ದ! ಇದಲ್ಲದೆ ಫಾರ್ಮಿನಲ್ಲಿ ಈ ಮೊದಲು ಎಂದೂ ಬೇನೆಯಿದ್ದಿಲ್ಲವೆಂದು ಬರೆದಿದ್ದರೂ ಕೂಡ, ಬೇನೆಯ ರಜೆಯನ್ನು ಅವನು ಎಷ್ಟೋ ಸಾರೆ ತೆಗೆದುಕೊಂಡಿದ್ದ. ಆ ರಜೆಯ ಸಲುವಾಗಿ ಡಾಕ್ಟರನ ಸರ್ಟಿಫಿಕೆಟನ್ನು ಅವನಾಗಿಯೇ ತಂದು ಕೊನೆಯವರೆಗೂ ಕಚೇರಿಯಲ್ಲಿ ಕೊಟ್ಟಿದ್ದ. ಅಮಲದಾರರದೇನು? ಹಾಜರಾಗಿ ಇದ್ದೇ ಇದ್ದರಲ್ಲ! ನಾನೂ ವಿಶ್ವಪ್ರಯತ್ನ ಮಾಡಿದೆ. ಆದರೆ ಆ ಘೋರವಾದ ಬೇನೆಯಿಂದ ಎದ್ದ, ಒಂದೆರಡು ಚಿಕ್ಕಮಕ್ಕಳುಳ್ಳ ಆ ಪೋಲೀಸನ ಹೆಂಡತಿಗೇನೂ ಹಣ ಸಿಗುವದು ಸಾಧ್ಯವಾಗಲಿಲ್ಲ! ಇದಕ್ಕೆ ಕಾರಣ?

ಆ ಅಂಧಃಕಾರದಲ್ಲಿ ಅಪಾರವಾದ ಸಾಗರದ ಸ್ಪಂದನದಂತೆ ಕೇಳ ಬರುತ್ತಿರುವ ತೆರೆಗಳ ಭೋರೆಂಬ ಸಪ್ಪಳವನ್ನು ಕೇಳುತ್ತ ನಾವಿಬ್ಬರೂ ಅಲ್ಲಿಯೇ ಎಷ್ಟೋ ವೇಳೆ ಕುಳಿತಿದ್ದೆವು.

---

# ಕಲ್ಲೆದೆಯ ಕಂಬನಿಗಳು.



ಆಕಾಶವು ಸೂರ್ಯನು ಕೂಡ ಕಾಣದಷ್ಟು ಕಾರ್ಮೋಡಗಳಿಂದ ತುಂಬಿ ಹೋಯಿತು. "ಏನು ಭಯಂಕರ ಸಂಹಾರವಿದು!" ಎಂದು ಆಕಾಶವು ಕಣ್ಣುಮುಚ್ಚಿಕೊಂಡಂತೆ ಭಾಸವಾಗುತ್ತಿತ್ತು.

ಟಪಟಪ ಮಳೆಯ ಹನಿಗಳು ಉದುರತೊಡಗಿದವು. ರಾಜಕವಿಗೆ ಸ್ಫೂರ್ತಿ ಬಂದಿತು— "ಮಹಾರಾಜ, ಆಕಾಶದ ಕಣ್ಣುಗಳೊಳಗಿಂದ ಕಂಬನಿಗಳು ಸುರಿಯುಹತ್ತಿವೆ."

ಎದುರಿನಲ್ಲಿಯ ಹೆಣಗಳ ರಾಶಿಯ ಕಡೆಗೆ ಉನ್ಮಾದದಿಂದ ನೋಡುತ್ತ ಪಾಷಾಣವರ್ಮರಾಜನು ಉದ್ಗಾರತೆಗೆದ "ಬೌದ್ಧ ಧರ್ಮದ ದೀಕ್ಷೆ ತೆಗೆದುಕೊಂಡಂತೆ ಕಾಣುತ್ತದೆ ಆಕಾಶ!"

ದಿಗ್ವಿಜಯಿಯಾದ ಸಮ್ರಾಟನ ವಿನೋದ! ತಿಮಿಂಗಿಲುಗಳ ಬಾಲದ ಹೊಡತವಿದ್ದಂತೆ! ಸುತ್ತಲು ನೆರೆದ ಸರದಾರರ ಗುಂಪಿನಲ್ಲಿ ಹಾಸ್ಯರಸದ ಲಹರಿಯು ಹಾಯ್ದುಹೋಯಿತು.

ಮೇಘಗಳ ಗಂಭೀರವಾದ ಗಡಗಡಾಟವು ಸಾವಕಾಶವಾಗಿ ಪ್ರಾರಂಭವಾಯಿತು. ರಾಜಕವಿಗಾದರೂ ಸ್ಫೂರ್ತಿ ಏರತೊಡಗಿತು. ಅವನಂದ. "ಮೇಘಗಳೆಲ್ಲಿಯವು? ಕೃಷ್ಣಸಿಂಹಗಳೇ ಇರುವವು ಅಲ್ಲಿ! ಅಗೋ, ಇದು ನೋಡಿರಿ, ಹೇಗೆ ಗುರು ಗುರು ಮಾಡುತ್ತಿರುವವು!"

ರಣಾಂಗಣದ ಮೇಲೆ ಬಿದ್ದ, ಗಾಯಾಳುಗಳ ನರಳುವಿಕೆಯ ಆರ್ತಸ್ವರವು ದೂರಿನಿಂದ ಕೇಳಬರುತ್ತಿತ್ತು. ಅದನ್ನು ಆಲಿಸುತ್ತ ಅರಸನಂದ "ತಪ್ಪಿದರಿ ನೀವು, ಕವಿರಾಜ! ಎಲ್ಲಿಯ ಕೃಷ್ಣಸಿಂಹ, ಎಲ್ಲಿಯದೇನು? ಆಕಾಶವು "ನಮೋ ಬುದ್ಧಾಯ, ನಮೋ ಬುದ್ಧಾಯ" ಅನ್ನುತ್ತಿದೆ.

ರಾಜನಿಗೆ ಮೂರರ ಮೇಲೆ ಅತ್ಯಂತ ಪ್ರೇಮ— ಒಂದು ಯುದ್ಧ, ಇನ್ನೊಂದು ಬುದ್ಧನ ನಿಂದೆ, ಮತ್ತೊಂದು ನರ್ತಕಿ. ಕೈಯಲ್ಲಿಯ ಖಡ್ಗದ ಝುಳಪಿಸುವಿಕೆಯಷ್ಟೇ, ನರ್ತಕಿಯ ಕಾಲೊಳಗಿನ ನೂಪುರಗಳ ಮಂಜುಳ ನಿನಾದವಾದರೂ ಆತನಿಗೆ ಸೇರುತ್ತಿತ್ತು. ಶತ್ರುಗಳ ಕೂಡ ಹೋರಾಡುವ ಆತನ ಬಾಹುಗಳು, ಬುದ್ಧನ ನಿಂದೆ ಮಾಡುವ ಆತನ ನಾಲಿಗೆ, ಕಲಾ ನಂತಿಯರ ನರ್ತನವನ್ನು ನೋಡುವ ಆತನ ಕಣ್ಣುಗಳು— ಆ ಆ ಕ್ಷಣ ದಲ್ಲಿ ವಿಷಯಾನುಸಾರವಾಗಿ ತಲ್ಲೀನತೆಯಿಂದ ಸಮರಸವಾಗುತ್ತಿದ್ದವು

ಮೃತ್ಯುವಿನ ಕರಾಳದವಡೆಯಂತಿರುವ ಯುದ್ಧದಲ್ಲಿಯ ಪ್ರೇಮ ಒಂದೆಡೆಗಾದರೆ, ಇನ್ನೊಂದೆಡೆಗೆ ಕಲೆಯ ಹಾಸ್ಯವದನದಂತಿರುವ ನೃತ್ಯ ಸಂಗೀತಗಳಲ್ಲಿ ಆದರ! ಆದರೆ ತನ್ನ ಸ್ವಭಾವದಲ್ಲಿಯ ಈ ವಿರೋಧ ವನ್ನು ಸಮ್ರಾಟ ಪಾಷಾಣವರ್ಮನು ಒಳ್ಳೇ ಮೋಜನಿಂದ ಸಮರ್ಥಿ ಸಿಕೊಳ್ಳುತ್ತಿದ್ದ. “ ಪ್ರಲಯಕಾಲದಲ್ಲಿ ರುದ್ರನು ತಾಂಡವನೃತ್ಯವನ್ನಾಡು ವದಿಲ್ಲವೆ? ಆ ನೃತ್ಯವನ್ನು ಅವನೇನೂ ಸ್ಮಶಾನದಲ್ಲಿ ಕಲಿಯಲಿಲ್ಲ! ಮತ್ತು ಇಡೀ ಭೂತಗಣವನ್ನು ತನ್ನ ಗುರುವನ್ನಾಗಿ ಮಾಡಿಕೊಳ್ಳಲಿಲ್ಲ! ಅದ ನ್ನೆಲ್ಲ ಆತನಿಗೆ ಕಲಿಸಿದವಳು ಪಾರ್ವತಿ. ಭಿಲ್ಲಿಣಿಯಾಗಿ, ತನ್ನ ಮೋಹ ಕವಾದ ನೃತ್ಯದಿಂದ, ಅವಳು ಅವನನ್ನು ಮೋಹಿಸಿ ಬಿಟ್ಟಿಲ್ಲಿಲ್ಲವೆ?”

ಮುಗಿಲಲ್ಲಿ ಮಿಂಚು ಹೊಳೆಯಹತ್ತಿತು. ಅರಸನನ್ನು ಆನಂದಪ ಡಿಸುವದಕ್ಕಾಗಿ ರಾಜಕವಿಯೆಂದ. “ಮಹಾರಾಜ, ಆಕಾಶವು ಎದೆ ಎದೆ ಒಡೆದುಕೊಳ್ಳಹತ್ತಿದೆ! ಬೌದ್ಧ ಧರ್ಮ! ಬೌದ್ಧ ಧರ್ಮ!”

ಆದರೆ ಮಿಂಚು ಕಂಡಕೂಡಲೆ ಅರಸನಲ್ಲಿ ನಿದ್ರಿತವಾದ ಇಚ್ಛೆಯು ಜಾಗೃತವಾಯಿತು. ಅವನಂದ. “ಭಲೆ! ಮೇಘಗಳ ತಾಳದಲ್ಲಿ ಮಿಂಚು ಕುಣಿಯಹತ್ತಿದೆ. ಆಯಿತು! ನಡೆಯಿರಿ ಶಿಬಿರಕ್ಕೆ, ಒಬ್ಬ ಸುಂದರ ನರ್ತಕಿ ಯನ್ನು ಬರಮಾಡೋಣ — ”

ಎಲ್ಲರೂ ಹತಬುದ್ಧರಾದರು. ನಗರವೆಲ್ಲವೂ ಭೀತಿಯಿಂದ ವ್ಯಾಕುಲ ವಾಗಿ ಹೋಗಿದೆ! ಎದುರಿನಲ್ಲಿ ಹೆಣಗಳ ರಾಶಿ! ಇಂಥ ವೇಳೆಯಲ್ಲಿ

ಊರ ಹೊರಗಿನ ಶಿಬಿರಕ್ಕೆ ಸುಂದರ ನರ್ತಕಿಯನ್ನು ತರುವದಾದರೂ ಎಲ್ಲಿಂದ?

ಯಾರಿಗೋ ನೆನಪಾಯಿತು—

ಮಧ್ಯಾಹ್ನದಲ್ಲಿ ಊರನ್ನು ಸುಲಿಯುವಾಗ ಸೈನಿಕರು ಎಷ್ಟೋ ಸ್ತ್ರೀಯರನ್ನು ಸೆರೆಯಾಳಾಗಿ ತಂದಿದ್ದರು. ಸಾಮ್ರಾಟನ ಇಚ್ಛೆಯನ್ನು ಪೂರೈಸುವದಕ್ಕಾಗಿ ಸರದಾರರು ಹೊರಟು ಹೋದರು.

"ಏನು ಕವಿರಾಜ, ಹೋಗುವದಲ್ಲವೆ, ಶಿಬಿರದ ಕಡೆಗೆ?" ಅರಸ ಕೇಳಿದ.

ಕವಿಯು ವ್ಯಾಕುಲ ದೃಷ್ಟಿಯಿಂದ ರಣಕ್ಷೇತ್ರದ ಕಡೆಗೆ ನೋಡುತ್ತಿದ್ದ.

"ಏನು ನೋಡುವಿರಿ, ಕವಿರಾಜ?"

"ಏನೂ ಇಲ್ಲ. ನನ್ನ ಮಿತ್ರನೊಬ್ಬನು ಯುದ್ಧದಲ್ಲಿ ಮಡಿದ. ಆತನ ಮೃತದೇಹದ ದರ್ಶನ ತೆಗೆದುಕೊಳ್ಳಬೇಕೆಂದು— "

"ನಿಮ್ಮಲ್ಲಿಯೂ ಬುದ್ಧನ ಅವತಾರವಾಯಿತೇನು? ಮಡಿದರೆ ಮುಗಿದು ಹೋಯಿತು ಮಾತು! ನನ್ನಂಥ ದಿಗ್ವಿಜಯಿಯಾದ ಅರಸರ ಆಸ್ಥಾನ ಕವಿಯೆಂದರೇನು, ಮತ್ತೆ ಅವನು ಇಷ್ಟು ಅಳ್ಕನದವನೇ?"

. ತುಸು ಮುಂದಕ್ಕೆ ಹೋಗಿ ಅರಸನು ಪ್ರಶ್ನೆ ಮಾಡಿದ "ಕೇಳಿದಿರೇನು ಈ ಸಂಗೀತವನ್ನು? " ಕವಿಯು ಮೈಮೇಲೆ ನವಿರೆದ್ದವು. ನರಳುವದು, ಗೋಳಾಡುವದು, "ನೀರು, ನೀರು" ಎಂದು ಆಕ್ರೋಶಮಾಡುವದು— ಎಲ್ಲವೂ ಎಷ್ಟು ಭಯಂಕರ!

ಸಹಜವಾಗಿಯೇ ಆತನ ಕಣ್ಣುಗಳಲ್ಲಿ ಕಂಬನಿ ತುಂಬಿದವು.

ಅರಸನಿಗೆ ಅದು ತಿಳಿಯುತ್ತಲೇ ತೀಕ್ಷ್ಣಸ್ವರದಲ್ಲಿಯೇ ಪ್ರಶ್ನೆ ಮಾಡಿದ. "ಕವಿರಾಜ, ಕಂಬನಿಸುರಿಸುವಿರಲ್ಲ ನೀವು! ಕಣ್ಣೀರು, ಅಳ್ಕನಪು ಳ್ಳವರ ಕಣ್ಣುಗಳ ವೈಭವ!"

ಅದೇ ವೇಳೆಗೆ ಕೋಲ್ಮಿಂಚು ಮಿಂಚಿತು. ಆ ದಿಗ್ವಿಜಯಿಯಾದ ಸಮ್ರಾಟನ ಕಣ್ಣುಗಳ ಮೇಲೆ ಪ್ರಕಾಶ ಬಿದ್ದಂತೆ, ಅವನ ಹೃದಯದ ಮೇಲಾದರೂ ಬಿದ್ದಿತು. ಅವೇನು ಕಣ್ಣುಗಳೇ? ಸಂಗಮರವರಿಯಂತಿದ್ದವು!

ಅದನ್ನು ನೋಡಿ ಕವಿಗೆನಿಸಿತು "ಕಲ್ಲಿಂದಾದರೂ ಕಂಬನಿಸುರಿಸುವದುಂಟೇ?

ಮಿತ್ರನ ಮೃತ ದೇಹವನ್ನು ಶೋಧಿಸದೆ ಕವಿಯು ಅರಸನ ಕೂಡ ಶಿಬಿರದ ಕಡೆಗೆ ತೆರಳಿದ.

× × × ×

ಸೆರೆಹಿಡಿದು ತಂದ ಸ್ತ್ರೀಯರಲ್ಲಿ ಓರ್ವ ಸುಂದರ ಮತ್ತು ನೃತ್ಯಕುಶಲ ವೇಶ್ಯೆ ಇದ್ದಳು.

"ನನ್ನ ನೃತ್ಯದ ಬೆಲೆಯೇ?" ಅವಳು ಸರದಾರರಿಗೆ ಪ್ರಶ್ನೆ ಮಾಡಿದಳು. ಸುವರ್ಣ ನಾಣ್ಯದ ಅಂಕಿಗಳು ಸರಸರನೆ ಮೇಲಕ್ಕೇರಹತ್ತಿದವು; ಆದರೆ ಪುಷ್ಪೆಯು ಮಾತ್ರ ಒಪ್ಪಲೊಲ್ಲಳು.

ಕಡೆಗೆ ಸರದಾರರು ಬೇಸತ್ತು ಅಂದರು--"ಹಾಗಾದರೆ ನೀನೇ ಹೇಳು ನಿನ್ನ ನೃತ್ಯದ ವಿಷಯವಾಗಿ ಏನು ಬೇಕಾದದ್ದನ್ನು!"

"ನನ್ನ ಸ್ವಾತಂತ್ರ್ಯ! ನೃತ್ಯ ಮುಗಿದಕೂಡಲೇ ನಾನು ಎಲ್ಲಿಬೇಕಾದಲ್ಲಿ ಹೋಗುವವಳು."

ಇದನ್ನು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು.

ದಿಗ್ವಿಜಯಿಯಾದ ಸಮ್ರಾಟನ ಕೃಪಾದೃಷ್ಟಿಯನ್ನು ಬಿಟ್ಟು, ಈ ವೇಶ್ಯೆಯು ಹೋಗುವದಾದರೂ ಎಲ್ಲಿ? ಹುಚ್ಚಿಯಾಗಿರಲಿಕ್ಕಿಲ್ಲವೇ ಇವಳು?

ಕ್ಷಣಮಾತ್ರದಲ್ಲಿ ಶಿಬಿರದಲ್ಲಿ ನೃತ್ಯಸಮಾರಂಭದ ಏರ್ಪಾಡಾಯಿತು. ಪುಷ್ಪೆಯ ಕಂಠದಲ್ಲಿ ಕೋಕಿಲೆಯ ಮಧುರತೆಯಿದ್ದಂತೆ, ಅವಳ ಅಭಿನ

ಯದಲ್ಲಿ ನವಿಲಿನ ಸಡಗರವಿತ್ತು. ಪ್ರತಿಕ್ಷಣವೂ ಅವಳ ದೇಹಲತೆಯು ರತ್ನಗಂಬಳಿಯ ಮೇಲೆ ತಾರಕಾಂಕಿತ ಗಗನದಲ್ಲಿ ಒಂದು ಕ್ಷಣದಲ್ಲಿ ಇಲ್ಲಿ, ಮರುಕ್ಷಣದಲ್ಲಿ ಅಲ್ಲಿ ಮಿಂಚುವ ವಿದ್ಯುಲ್ಲತೆಯಂತೆ ನಲಿಯುತ್ತಿತ್ತು! ಮಂದವಾದ ವಾಯುಲಹರಿಯಲ್ಲಿ ಅಲೆದಾಡುವ ಲತೆಯಂತೆ, ಅವಳ ಸೂಚಕವಾದ ಅಭಿನಯವು ಅರಸನಿಗೆ ಮನೋಹರವೆನಿಸಿತು. ಅವಳ ಪ್ರತಿಯೊಂದು ಹಾವಭಾವದೊಂದಿಗೆ, ಪ್ರೇಕ್ಷಕಗಣದ ಮೇಲೆ ಸುಗಂಧ ಪುಷ್ಪಗಳ ಮಳೆಗರೆದಂತೆ ಭಾಸವಾಗುತ್ತಿತ್ತು. ಸಾಮ್ರಾಟ ಪಾಷಾಣ ವರ್ಮನು ಮುಗ್ಧನಾಗಿಬಿಟ್ಟ.

ಪುಷ್ಪೆಯು ಆ ದಿನ ತನ್ನ ಕೌಶಲ್ಯಕ್ಕೆ ಕಳಸವನ್ನೇರಿಸಿಬಿಟ್ಟಳು. ಅವಳ ಮಧುರಾಲಾಪದಿಂದ ಬೆಳದಿಂಗಳಿನ ಮಳೆ ಸುರಿಯುತ್ತಿತ್ತೆಂದಮೇಲೆ ಅವಳ ಮೋಹಕವಾದ ನೃತ್ಯವು ಆ ಬೆಳದಿಂಗಳಿನಲ್ಲಿ ಕುಳಿತ ಸರಸ್ವತಿಯ ವಿಣಾವಾದನದಂತೆ ಭಾಸವಾಗುತ್ತಿತ್ತೆಂಬುದರಲ್ಲಿ ಆಶ್ಚರ್ಯವೇನು?

ಆದರೆ ಅವಳ ಗೀತದಲ್ಲಿಯ ಅರ್ಥದ ಕಡೆಗೆ ಯಾರ ಲಕ್ಷ್ಯವೂ ಇದ್ದಿಲ್ಲ. ಅವಳ ಒಂದು ಗೀತವು, ಮಧ್ಯರಾತ್ರಿಯಲ್ಲಿ ಹಾಸಿಗೆಯ ಮೇಲೆ ತಳಮಳಿಸುತ್ತಿರುವ ರಾಜಪುತ್ರನ ಹೃದಯದ ಕೂಗನ್ನು ವ್ಯಕ್ತಮಾಡುತ್ತಿತ್ತು. ಆ ರಾಜಪುತ್ರನು ಬಹುತರವಾಗಿ ಬುದ್ಧನೇ ಆಗಿರಬೇಕು! ಆತನ ಹೃದಯವು ಹೇಳುತ್ತಿತ್ತು:—

"ನಾನಿಲ್ಲಿ ಮಂಚದಮೇಲೆ ಮಲಗಿಕೊಂಡಿದ್ದೇನೆ. ಆದರೆ ಹೊರಗೆ-?

ಹೊರಗೆ ಅನಾಥರು—ವಿಕೃತರು, ಬಡಬಗ್ಗರು, ತೊಯ್ದುಭೂಮಿಯಮೇಲೆ, ಹೊಟ್ಟೆಯಲ್ಲಿ ಕಾಲಿರಿಸಿಕೊಂಡು ಮುದ್ದೆಯಾಗಿ ಬಿದ್ದಿರುವರು.

ಹಸಿವೆ ಇಲ್ಲದ ಮೂಲಕ ಬಡಿಸಿಟ್ಟ ಪಕ್ವಾನ್ನಗಳನ್ನು ಹೆಸರಿಗೆ ಮಾತ್ರ ಮುಟ್ಟಿ, ನಾನು ಈಗಲೆ ಎದ್ದು ಬಂದೆ. ಆದರೆ ಹೊರಗೆ?—

ಹೊರಗೆ, ನೆಲದಮೇಲೆ ಬಿದ್ದ ತಂಗಳು ಒಣ ರೊಟ್ಟಿಯ ತುಣಕುಗಳನ್ನು ತಿಂದೂ ಹಸಿವೆ ಹಿಂಗದ್ದರಿಂದ ಅತ್ತು ಬೇಸತ್ತು, ಬಡಬಗ್ಗರ ಮಕ್ಕಳುಗಳು ನಿದ್ರೆಹೋಗಿವೆ

ಮಂಚದ ಮೇಲೆ ಮಲಗಿಕೊಂಡಿರುವ ನನ್ನ ಹೆಂಡತಿಯ ಮೈಮೇಲಿನ ರತ್ನಗಳು ದೀಪಪ್ರಕಾಶದಲ್ಲಿ ಚಕಚಕ ಹೊಳೆಯುತ್ತಿವೆ. ಆದರೆ ಹೊರಗೆ?—

ಹೊರಗೆ ಅಸಂಖ್ಯ ತಾಯಂದಿರು, ತಂಗೆಂದಿರು, ಹೆಂಡಂದಿರು, ಹೆಣ್ಣುಮಕ್ಕಳು, ಇದೇ ಕ್ಷಣಕ್ಕೆ ತಳಮಳಿಸುತ್ತಿರಬೇಕು. ಕಪೋಲಗಳ ಮೇಲೆ ಹರಿದು ಬಂದ ಕಂಬನಿಗಳೇ ಅವರ ಅಲಂಕಾರ.

ನನಗೆ ನಿದ್ರೆ ಬರುವದಿಲ್ಲ. ಯಾವಾಗ್ಗೆ ಒಮ್ಮೆ ಬೆಳಗಾದೀತೆಂದು ದಾರಿನೋಡುತ್ತಿರುವೆ. ರಮ್ಯ ಉಷಃಕಾಲವು ಆಗುವದು ಯಾವಾಗ್ಗೆ ಅನ್ನುವೆ. ಆದರೆ ಹೊರಗೆ?—

ಹೊರಗಿನ ಬಡಬಗ್ಗರಿಗೆ, ದೀನ ಹೀನರಿಗೆ, ಅನಾಥ ಅಪಂಗರಿಗಾದರೂ ಹೀಗೆಯೇ ಅನಿಸುತ್ತಿರಬಹುದೇ? ಛೀ ! ಉಷಃಕಾಲವೆಂದರೆ ಲಗ್ನದಲ್ಲಿಯ ಲಾಜಾಹೋಮದಂತೆ ಎಂದು ಅನಿಸುವದು ನನಗೆ ಮಾತ್ರ. ಆದರೆ ಅವರಿಗೆ?— ವಧ್ಯ ಪಶುವಿಗೆ ಯಜ್ಞದಲ್ಲಿಯ ಹೋಮವೆಂದಾದರೂ ಸೇರುವದುಂಟೆ? ಉಷಃಕಾಲವೆಂದರೆ ಮತ್ತೊಂದು ಕಠಿಣತರವಾದ ಹೊಸ ದಿವಸ! ಅಂಥ ಹೊಸದಿವಸದ ಉದಯವಾಗುವದಕ್ಕಿಂತ ಆ ರಾತ್ರಿಯೇ ಕಾಲರಾತ್ರಿಯಲ್ಲಿ ರೂಪಾಂತರವಾಗಬೇಕೆಂದೆನಿಸುತ್ತಿರಬೇಕು ಅವರಿಗೆ.

ಹಿಮಾಲಯದ ವೃಕ್ಷಛಾಯೆಯಲ್ಲಿ ಅಲೆದಾಡುವ ಮನುಷ್ಯನಿಗೆ ಮಧ್ಯಾಹ್ನದ ಸೂರ್ಯಕಿರಣಗಳು ಚಂದ್ರಕಿರಣಗಳಂತೆಯೇ ಭಾಸವಾಗುವವು. ಪುಷ್ಪೆಯಗಾಯನಮಾಧುರ್ಯದ ಮೂಲಕ ಗೀತದಲ್ಲಿಯ ಪ್ರಚುರ ವಿಚಾರಗಳ ಕಡೆಗೆ ಯಾರದೂ ಲಕ್ಷ್ಯ ಹೋಗಲಿಲ್ಲ.

ಗಾಯನವು ಮುಗಿಯಿತು. ನೃತ್ಯವೂ ಮುಗಿಯುತ್ತ ಬಂದಿತು. ಪುಷ್ಪೆಯ ಕಾಲೊಳಗಿನ ನೂಪುರಗಳೊಳಗಿಂದ "ನಮೋ ಬುದ್ಧಾಯ, ನಮೋ ಬುದ್ಧಾಯ" ಅನ್ನುವಂತೆ ಧ್ವನಿಯು ಸ್ಪಷ್ಟವಾಗಿ ಕೇಳಬರಹ

ತ್ತಿತು. 'ಶತ್ರು ಪಕ್ಷದಲ್ಲಿಯ ಈ ವೇಶ್ಯೆಯು ಸಾಮ್ರಾಟನ ಎದುರಿನಲ್ಲಿಯೇ ಅವನನ್ನು ಅಣಕಿಸುವಳಲ್ಲ' ಎಂದು ಸರದಾರರಿಗೆ ಅನಿಸಿತು. ಅವರೊಳಗಿನವನೊಬ್ಬನು ಖಡ್ಗಕ್ಕೆ ಕೈಹಾಕಿ ಎದ್ದನು ಸಹ. ಆದರೆ ನೃತ್ಯದಲ್ಲಿ ತಲ್ಲೀನನಾಗಿ ಹೋದ ಅರಸನನ್ನು ನೋಡಿದ ಕೂಡಲೆ ಪುಷ್ಪೆಯನ್ನು ಅಡ್ಡಗಟ್ಟುವ ಧೈರ್ಯವು ಆತನಿಗಾಗಲಿಲ್ಲ.

ನೃತ್ಯವೂ ಮುಗಿಯಿತು. ಎಲೆಯಡಿಕೆಯ ಸಮಾರಂಭದ ಕಾಲದಲ್ಲಿ ಪುಷ್ಪೆಯು ಅತ್ತರವನ್ನು ಹಚ್ಚಿಕೊಳ್ಳಲಿಕ್ಕೆ ಒಪ್ಪಲಿಲ್ಲ. ಅರಸನಿಗೆ ಆಶ್ಚರ್ಯವಾಯಿತು ವೇಶ್ಯೆಗೆ ಸುಗಂಧದ ವಿಷಯದಲ್ಲಿ ಬೇಸರವೇ? ಅವನು ಕೇಳಿದ. "ನರ್ತಕಿ, ನಿನಗೆ ಸುಗಂಧ ಸೇರುವದಿಲ್ಲವೇ?"

"ಸೇರುವದು, ಮಹಾರಾಜರೆ! ನನಗೆ ಹೂಗಳನ್ನು ಕೊಡಿರಿ. ಒಂದು ವೇಳೆ ವಾಸನೆ ಇಲ್ಲದಿದ್ದರೂ ಅವುಗಳನ್ನು ಆನಂದದಿಂದ ಸ್ವೀಕರಿಸುವೆ."

ರಣಾಂಗಣದಲ್ಲಿ ಹೂಗಳೆಲ್ಲಿ ದೊರೆಯಬೇಕು? ವೇಶ್ಯೆಯು ಸಾಮ್ರಾಟನ ಸತ್ವಪರೀಕ್ಷೆಯನ್ನೇ ಮಾಡುವಂತಾಯಿತು.

ಅರಸನು ನಗುತ್ತ ಹೇಳಿದ "ನರ್ತಕಿ, ಅತ್ತರವನ್ನು ಹೂವಿನಿಂದಲೇ ಮಾಡುವರು."

"ಹೌದು ಮಹಾರಾಜರೆ, ಆದರೆ ಅತ್ತರವೆಂದರೆ ಹೂವಿನ ರಕ್ತ! ನನಗೆ ಬೇಕಾದದ್ದು ಸಜೀವ ಸುಗಂಧ! ಎರಡನೆಯವರ ಜೀವ ತೆಗೆದುಕೊಳ್ಳುವದರಲ್ಲಿ ಸಿಗುವ ಆನಂದದ ಕಲ್ಪನೆಯು ನನ್ನಂಥ ನರ್ತಕಿಗೆ ಎಲ್ಲಿಂದ ಬರಬೇಕು?"

ಅರಸನ ಕಣ್ಣುಗಳು ಮಂಗಳನಂತೆ ಹೊಳೆದವು. ಇನ್ನು ಮೇಲೆ ಅವಳ ತಲೆ ಹೊಡೆಯುವ ಆಜ್ಞೆಯೂ ಹೊರಬೀಳುವದೆಂದು ಎಲ್ಲರಿಗೂ ಅನಿಸಿತು. ಪಾಷಾಣವರ್ಮನು ಅವಳನ್ನು ದಿಟ್ಟಿಸಿ ನೋಡುತ್ತಿದ್ದ. ಕ್ಷಣಾರ್ಧದಲ್ಲಿಯೇ ಆತನ ಕಣ್ಣುಗಳಲ್ಲಿಯ ಮಂಗಳನ ತೇಜಸ್ಸು ಶುಕ್ರನದಾಗಿ ರೂಪಾಂತರ ಹೊಂದಿತು.

ನರ್ತಕಿಯು ಹೊರಟು ಹೋದಳು. ಅರಸನು ಮಂಚಕದ ಮೇಲೆ ಮಲಗಿಕೊಂಡ. ಮರುದಿವಸದ ಯುದ್ಧದ ವಿಷಯದಲ್ಲಿ ವಿಚಾರ ಮಾಡುತ್ತಿರುವಾಗ ಕ್ಷಣಕ್ಷಣಕ್ಕೂ ಆತನ ವಿಚಾರಮಾಲಿಕೆಯು ಹರಿದು ಬೀಳುತ್ತಿತ್ತು. ಹೀಗೆ ಯಾಕಾಗಬೇಕು? ಅವನು ಎದ್ದು ಹೊರಗೆ ಬಾಗಿಲ ಕಡೆಗೆ ಬಂದ. ದೂರಿನ ದಿನ್ನೆಯ ಹಿಂದಿನಿಂದ ಅದೇ ಚಂದ್ರನು ಮೇಲಕ್ಕೇರುತ್ತಿದ್ದ. ಹೊರಗಿನ ಕತ್ತಲೆಯಲ್ಲ ಬೆಳಕಿಗೆ ಎಡೆ ಮಾಡಿಕೊಡುವಂತಿತ್ತು. ಆದರೆ ಅರಸನ ಮನದಲ್ಲಿ?—ಮರುದಿವಸದ ಯುದ್ಧಕಿಂತಲೂ, ಆಗಳಿನ ನರ್ತಕಿಯೇ ಆತನ ಮನೋಮಂದಿರದಲ್ಲಿ ಹೆಚ್ಚಾಗಿ ಕುಣಿಯುತ್ತಿದ್ದಳು.

ಪಾಷಾಣವರ್ಮನು ನರ್ತಕಿಗೆ ಮತ್ತೆ ಬರಹೇಳಿದ. ಆದರೆ ಅವಳು ಶಿಬಿರದ ಹೊರಗೆ ಬಂದೊಡನೆಯೆ, ಯಾರ ಕೂಡ ಒಂದು ಶಬ್ದವನ್ನಾಡದೆ, ಹೋಗಿ ಬಿಟ್ಟಿದ್ದಳು.

ಪಾಷಾಣವರ್ಮನು ತನ್ನ ಹಾಸಿಗೆಯಲ್ಲಿ ಒಂದೇಸವನೆ ತಳಮಳಿಸಹತ್ತಿದ್ದ. ಪ್ರತಿನಿತ್ಯವೂ ವಿಜಯ ಲಕ್ಷ್ಮಿಯ ಮಧುರ ಗೀತಗಳನ್ನು ಕೇಳುತ್ತಲೇ ನಿದ್ರೆಹೋಗುವವ. ಆದರೆ ಇಂದು ಮಾತ್ರ ವಿಜಯಲಕ್ಷ್ಮಿಯು ವಾಚಾಹೀನಳಾಗಿದ್ದಳು. ವಾಚಾಹೀನಳಾಗದೆ, ಆ ನರ್ತಕಿಯ ದಾಸಿಯಾಗಿ ಹೋಗಿದ್ದರೂ ಹೋಗಿರಬಹುದೆಂದು ಆತನಿಗೆ ಅನಿಸಿತು! ಒಂದು ಮಗ್ಗಲಿನಿಂದ ಮತ್ತೊಂದು ಮಗ್ಗುಲಿಗೆ ಹೊರಳುವಾಗ, ದಿಂಬಿನಹತ್ತರವೇ ಇದ್ದ ಖಡ್ಗಕ್ಕೆ ಆತನ ಕೈತಾಕಿ ಆದ 'ಖಣ್' ಎಂಬ ಸಪ್ಪಳವು ಆತನಿಗೆ ಕರ್ಕಶತರವಾಗಿ ಕೇಳಬಂದಿತು; ಮತ್ತು ಅದೇ ಕ್ಷಣಕ್ಕೆ ನೃತ್ಯವನ್ನು ಮುಗಿಸುವಾಗ ನರ್ತಕಿಯು ನೂಪುರದಿಂದ ಹೊರಗೆಡವಿದ 'ನಮೋ ಬುದ್ಧಾಯ, ನಮೋ ಬುದ್ಧಾಯ' ಎಂಬ ಶಬ್ದಗಳು ಆತನ ಕಿವಿಗಳಲ್ಲಿ ದುಮುಕತೊಡಗಿದವು.

ಹೆಚ್ಚಾಗಿ ಸೆಕೆಯಾಗಹತ್ತಿತೆಂದರೆ, ಅದರ ಹಿಂದಿನಿಂದ ಮಳೆಯೂ ಬರುವದುಂಟು. ಇನ್ನು ಮುಂದೆ ತನ್ನ ಕಣ್ಣುಗಳಲ್ಲಿ ಕಂಬನಿಗಳೆಲ್ಲಿ ನಿಲ್ಲುವವೋ ಏನೋ ಎಂಬ ಭಯವು ಅರಸನ ಮನವನ್ನು ಆವರಿಸಿಬಿಟ್ಟಿತು.

ಕೂಡಲೆ ಆತನಿಗೆ ಸಂಜೆಯ ಮುಂದಿನ ತನ್ನ ಶಬ್ದಗಳೇ ನೆನಪಿಗೆ ಬಂದವು "ಕಣ್ಣೀರು ಅಳ್ಳನವುಳ್ಳವರ ಕಣ್ಣುಗಳ ವೈಭವ!" ನೃತ್ಯದಿಂದ ಭಾವನಾಮಯವಾದ ಮನಸ್ಸನ್ನು ಕಠೋರವಾಗಿ ಮಾಡಲೇಬೇಕು. ಆಯಿತು! ಇನ್ನು ಮುಂದೆ ಒಂದೇ ಮಾರ್ಗ! ಈಗಿಂದೀಗಲೇ ಮಧ್ಯ ರಾತ್ರಿಯಲ್ಲಿ ರಣಾಂಗಣಕ್ಕೆ ಹೋಗಿ, ಆ ಹೆಣಗಳ ಆ ರಾಶಿಯಲ್ಲಿ ನರ್ತಕಿಯ ಸುಂದರ ಮೂರ್ತಿಯನ್ನು ಹುಗಿದು ಬಿಡುವದು! ನಾಯಿ ನರಿಗಳು ಹೆಣ ಗಳನ್ನು ಹರಿಯುವಾಗ ಬರುವ ಭಯಂಕರ ಸಪ್ಪಳವು ಒಮ್ಮೆ ಕಿವಿಯಲ್ಲಿ ಸೇರಿತೆಂದರೆ ನೂಪುರಗಳ ಮಂಜುಳಧ್ವನಿಯು ತಾನಾಗಿಯೇ ನನ್ನ ಮನ ದೊಳಗಿಂದ ಕಾಲ್ತೆಗೆಯುವದು.

ಪಾಷಾಣವರ್ಮನು ಏಕಾಕಿಯಾಗಿಯೇ ಶಿಬಿರದ ಹೊರಗೆ ಬಂದನು! ಬೆಳದಿಂಗಳಿನಬದಲಾಗಿ ಗಿಡಗಳ ಬುಡದಲ್ಲಿಯ ನೆರಳುಗಳ ಕಡೆಗೆಯೇ ನೋಡುತ್ತ ರಣಾಂಗಣಕ್ಕೆ ಸಮೀಪಿಸಿದ. ಆತನ ಹೆಜ್ಜೆಯ ಸಪ್ಪಳ ಕೇಳಿ ದೊಡನೆಯೆ, ನರಿಯೊಂದು ಸರ್‍ರನೆ ಓಡಿ ಮಾಯವಾಯಿತು. ತನ್ನ ಮನ ಸ್ಸಿನಲ್ಲಿಯ ನಿರ್ಬಲವಿಚಾರಗಳಾದರೂ ಅದರಂತೆಯೇ ಓಡುವವೆಂದು ಆತನಿಗೆ ಭಾಸವಾಯಿತು.

ಆಳವಾದ ಬಾವಿಯೊಳಗಿಂದ ಕೇಳಬರುವಂತೆ "ನೀರು, ನೀರು" ಎಂಬ ಶಬ್ದಗಳು ಕೇಳಬಂದವು.

ಕಠೋರವಾಗಹತ್ತಿದ್ದ ಅರಸನ ಮನವೆಂದಿತು. "ದಿಗ್ವಿಜಯಿಯಾದ ಸಮ್ರಾಟನ ಹತ್ತರ ಸಿಗುವದು ಕೇವಲ ಖಡ್ಗಧಾರೆಯ ಕೆನ್ನೀರೇ!"

ಶಬ್ದವು ಕೇಳಬಂದ ಕಡೆಗೆ ಅರಸನು ತನ್ನ ದೃಷ್ಟಿ ತಿರುವಿದ.

ಒಂದು ಮನುಷ್ಯಾಕೃತಿಯು ಲಗುಬಗೆಯಿಂದ ಅತ್ತಕಡೆಗೆ ಹೋಗು ತ್ತಿತ್ತು. ಭೂತ-ಪಿಶಾಚಿಯಾದರೂ ಇರಲಿಕ್ಕಿಲ್ಲವೇ? ಎಂದು ಅರಸನ ಮನ ಸ್ಸಿನಲ್ಲಿ ಸಂಶಯ ಉಂಟಾಯಿತು. ಅವನು ತುಸು ಮುಂದಕ್ಕೆ ಹೋದ. ಯಾವಳೋ ಒಬ್ಬಳು ಸ್ತ್ರೀಯಂತಿದ್ದಳು! ಅವಳ ಲಗುಬಗೆಯ ನಡಿಗೆಯ

ಲ್ಲಿಯೂ ತಾಲಬದ್ಧತೆಯಿತ್ತು! ಯುದ್ಧದಲ್ಲಿ ಮಡಿದ ತನ್ನ ವಲ್ಲಭನನ್ನು ಹುಡುಕುವದಕ್ಕಾಗಿ ಬಹುತರವಾಗಿ ನಗರದೊಳಗಿಂದ ಬಂದಿರಬಹುದು!

ಅರಸನ ಕುತೂಹಲವು ಹೆಚ್ಚಾಗಿ ಬೆಳೆಯಹತ್ತಿತು. ಸದ್ದು ಮಾಡದೇ ಆ ಸ್ತ್ರೀಯ ಬೆನ್ನುಹತ್ತಿದ. ಸ್ವಲ್ಪ ದಿಟ್ಟಿಸಿ ನೋಡಿದಾಗ ಅವಳ ಕೈಯ್ಯಲ್ಲಿ ಏನೋ ಕಾಣುತ್ತಿತ್ತು. ತನ್ನ ವಲ್ಲಭನು ಕೊಟ್ಟ ಪ್ರೀತಿಯ ಕಾಣಿಕೆಯಾಗಿರಬಹುದೇ ಅದು?

'ನೀರು, ನೀರು' ಎಂದು ಶಬ್ದಹೊರಡುವ ಸ್ಥಳದ ಹತ್ತರ ಸ್ತ್ರೀಯು ನಿಂತಳು. ಅವಳು ಕೆಳಗೆ ಬಗ್ಗಿ ಕ್ಷಣಹೊತ್ತು ದಿಟ್ಟಿಸಿ ನೋಡಿ, ಸೆರಗಿನಿಂದ ಕಣ್ಣೊರಿಸಿಕೊಂಡಳು. ಅಲ್ಲಿಯೇ ಕೆಳಗೆ ಕುಳಿತು, ಕೈಯೊಳಗಿನ ಪಾತ್ರೆಯಿಂದ ನೀರನ್ನು, ನೀರಡಿಕೆಯಿಂದ ವ್ಯಾಕುಲನಾದ ಆ ಮನುಷ್ಯನಿಗೆ ಅವಳು ಗುಟುಕುಗುಟುಕಾಗಿ ಕುಡಿಸಿದಳು. ಆ ಸ್ತ್ರೀಯ ಮುಖವನ್ನಾದರೂ ನೋಡಬೇಕೆಂಬ ಇಚ್ಛೆಯು ಅರಸನಲ್ಲಿ ತೀವ್ರವಾಗಿ, ಅವನು ಮುಂದಕ್ಕೆ ಬಂದ. ಕೂಡಲೆ ಆ ಸ್ತ್ರೀಯು ಬೆದರಿ ಮೇಲಕ್ಕೆ ನೋಡಿದಳು. ನರ್ತಕಿಯಾದ ಪುಷ್ಪೆಯೇ ಅವಳು! ಬಂದವನು ಪಾಷಾಣವರ್ಮನೆಂದು ತಿಳಿದ ಕೂಡಲೆ ಅವಳು ಒಮ್ಮೆಲೆ ಮೋರೆ ತಿರುವಿ ಉದ್ಗಾರತೆಗೆದಳು "ಛೀಃ! ನಾಯಿ ನರಿ!"

ಅವಳ ಉದ್ಗಾರದಿಂದ ಅರಸನಿಗೆ ಕೋಪಬಂದಿತು. ಆದರೆ ಗಾಯ ಹೊಂದಿದ ಆ ಮನುಷ್ಯನನ್ನು ತೋರಿಸುತ್ತ ಅವನು ಕೇಳಿದ.

"ಇವನು ಯಾರು?" ನಿನಗೇನಾಗಬೇಕು.?

"ನನಗೆ? ಅಣ್ಣನಾಗಬೇಕು"

"ಅಣ್ಣನೇ?"

"ಹೌದು! ನೀವಾದರೂ ನನಗೆ ಅಣ್ಣಂದಿರೇ. ಒಬ್ಬನೇ ಈಶ್ವರನು ನಮ್ಮೆಲ್ಲರನ್ನು — ಅಣ್ಣ-ತಮ್ಮಂದಿರೆಲ್ಲರೂ ಒಬ್ಬರಂತೆ ಇನ್ನೊಬ್ಬರು ಇರುವರಿಲ್ಲಿ?"—

ಸಮ್ರಾಟನು ಸ್ತಂಭಿತನಾದ. ಆದರೆ ಆಗಳಿನ 'ನಾಯಿ ನರಿ' ಶಬ್ದವು ಅವನ ಹೃದಯದಲ್ಲಿ ಶಲ್ಯದಂತೆ ಚುಚ್ಚುತ್ತಿತ್ತು. ಅವನಂದ "ನಿನ್ನಂಥ ವೇಶ್ಯೆಯು ಇಂಥ ವೇಳೆಯಲ್ಲಿ ರಂಗಮಹಾಲಿನಲ್ಲಿರಬೇಕು. ಇಂಥ ಈ ನರಕದಲ್ಲಿ—"

ಪುಷ್ಪೆಯು ನಗುನಗುತ್ತಲೇ ಹೇಳಿದಳು "ಇದು ನರಕವೇ? ಯಾರು ನಿರ್ಮಾಣಮಾಡಿದರು ಈ ನರಕವನ್ನು?"

ಅವಳ ಪ್ರಶ್ನೆಯು ಅರಸನಿಗೆ ಖಡ್ಗದ ಏಟಿನಂತೆ ಭಾಸವಾಯಿತು. ಆದರೆ ಈ ವಾಗ್ಯುದ್ಧದಲ್ಲಿ ಶತ್ರುವನ್ನು ಸೋಲಿಸುವದು ಸಾಮಾನ್ಯ ಕೆಲಸವಲ್ಲವೆಂಬುದನ್ನು ಅವನು ತಿಳಿದುಕೊಂಡ.

ಅವನು ಮೃದುವಾದ ಸ್ವರದಲ್ಲಿ ಹೇಳಿದ. "ರಮಣನಿಗೆ ಮದಿರೆಯ ಪಾತ್ರೆಯನ್ನು ತುಂಬಿಕೊಡುವ ಈ ಸಮಯದಲ್ಲಿ—"

ವ್ಯಾಕುಲವಾದ ಜೀವವು ಶಾಂತವಾದ ಮೂಲಕ ಕೃತಜ್ಞ ದೃಷ್ಟಿಯಿಂದ ನೋಡುತ್ತಿದ್ದ ಗಾಯಾಳುವಿನ ಕಡೆಗೆ ಬೆರಳು ಮಾಡಿ ಪುಷ್ಪೆಯು ಉತ್ತರಕೊಟ್ಟಳು. "ಈ ಕ್ಷಣದಲ್ಲಿ ಇವನೇ ನನ್ನ ರಮಣನಾಗಿದ್ದಾನೆ" ಕೈಯಲ್ಲಿಯ ನೀರಿನ ಪಾತ್ರೆಯನ್ನು ಮುಂದಕ್ಕೆ ಮಾಡಿ "ಮತ್ತು ಇಲ್ಲಿ ನೋಡಿದಿರಾ, ಈ ಮದಿರೆಯನ್ನು?"

ಕಾಲಿನ ಒಂದೇ ಒದಿಕೆಯಿಂದ ಅವಳ ಕೈಯಲ್ಲಿಯ ನೀರಿನ ಪಾತ್ರೆಯನ್ನು ಹಾರಿಸಿಬಿಡಬೇಕೆಂಬ ವಿಚಾರವೂ ಅರಸನ ಮನಸ್ಸಿನಲ್ಲಿ ಇಣಿಕಿ ಹೋಯಿತು. ಆದರೆ ಅದು ಕ್ಷಣ ಮಾತ್ರವೇ. ಪುಷ್ಪೆಯನ್ನು ಅಣಕಿಸಬೇಕೆಂದೇ ಅವನಂದ. "ರಂಗ ಮಹಾಲಿನಲ್ಲಿಯ ಪುಷ್ಪಮಾಲೆಗಳ ಸುಗಂಧವೆತ್ತ, ಮತ್ತು ಈ ಹೆಣಗಳ ದುರ್ಗಂಧವೆತ್ತ"

ರಣಾಂಗಣದ ಮೇಲೆ ರಾಸಿರಾಸಿಯಾಗಿ ಬಿದ್ದ ಹೆಣಗಳ ಕಡೆಗೆ ನೋಡುತ್ತ ಪುಷ್ಪೆಯು ಕೇಳಿದಳು "ಮಹಾರಾಜರೇ, ಈ ಹೆಣಗಳಾ

ದರೂ ಹೂವುಗಳೇ—ಧರಣೀಮಾತೆಯ ಈ ಸುಕುಮಾರ ಹೂಗಳನ್ನು ಹರಿದು ಚಿಂದಿ ಚಿಂದಿಯಾಗಿ ಮಾಡಿ ಕೊಂದು ಒಗೆದ ರಾಕ್ಷಸನಿಗೆ ನೀವು ಶಿಕ್ಷೆಮಾಡುವಿರಾ?

ಚಂದ್ರನ ಮೇಲೆ ಮೋಡಗಳು ಬಂದವು. ಅರಸನ ಮುಖದಮೇಲೆ ವಿಲಕ್ಷಣ ವಿಚಾರಗಳ ಛಾಯೆಯು ಕಂಡುಬರುತ್ತಿತ್ತು. ಕ್ಷಣಾರ್ಧದಲ್ಲಿ ಮತ್ತೆ ಚಂದ್ರನ ನಗುಮೊಗವು ಮೇಘಗಳಾಚೆಯಿಂದ ಕಂಡುಬಂದಿತು. ಅರಸನು ಪುಷ್ಪೆಯ ಹತ್ತಿರದಲ್ಲಿ ಬಂದು ಪ್ರಶ್ನೆಮಾಡಿದ "ನರ್ತಕಿ, ನೀನು ನನ್ನ ಪಟ್ಟರಾಣಿಯಾಗುವಿಯಾ?"

ಪುಷ್ಪೆಯು ನಿರುತ್ತರಳಾದಳೆಂದು ಅರಸನಿಗೆನಿಸಿತು. ರಮಣಿಯರ ಮನಸ್ಸಿನ ಮೇಲೆ ವಿಜಯ ಸಂಪಾದಿಸುವದೆಂದರೆ ದಿಗ್ವಿಜಯಕ್ಕಿಂತಲೂ ಕಠಿಣತರ! ಸಮ್ರಾಟನು ಮತ್ತೆ ಅಭಿಮಾನದಿಂದ ಕೇಳಿದ.

"ಯಾಕೆ, ಏನು ವಿಚಾರ ಮಾಡುವಿ?"

ಪುಷ್ಪೆಯ ಕಣ್ಣುಗಳ ಮುಂದೆ ಈ ಮಧ್ಯರಾತ್ರಿಯ ಬದಲಾಗಿ ಇನ್ನೊಂದು ಮಧ್ಯರಾತ್ರಿಯ ಸಮಯವು ಕುಣಿಯುತ್ತಿತ್ತು, ರಣಾಂಗಣವು ರಂಗಮಹಾಲಾಯಿತು, ತಾರೆಗಳು ಅತ್ತರಿನ ದೀಪಗಳಾಗಿ ಉರಿಯಹತ್ತಿದವು ಮತ್ತು ಎದುರಿನಲ್ಲಿಯ ಸಮ್ರಾಟ ಪಾಷಾಣವರ್ಮನ ಬದಲಾಗಿ, ಅವಳಿಗೆ ಕಾವಿಯ ವಸ್ತ್ರಗಳನ್ನು ಧರಿಸಿದ ಸುಂದರ ತರುಣ ಬುದ್ಧಭಿಕ್ಷುವು ಕಾಣಿಸತೊಡಗಿದ. ಮಧ್ಯರಾತ್ರಿಯ ಸಮಯದಲ್ಲಿ ಕಪಟದಿಂದ—ಮರಣೋನ್ಮುಖ ಮನುಷ್ಯನಿಗೆ ಧೈರ್ಯ ಹೇಳಲಿಕ್ಕೆ ತಾನು ಅವನನ್ನು ತನ್ನ ಮಹಲಿನಲ್ಲಿ ಬರಮಾಡಿಕೊಂಡಿದ್ದಳು. ವಿಶ್ರಾಂತಿಯ ಸಲುವಾಗಿಯೆಂದು ಮಂಚಕದ ಮೇಲೆ ಕುಳಿತು ಉಪದೇಶ ತೆಗೆದುಕೊಳ್ಳುವ ನೆವದಿಂದ, ತಾನು ಆತನ ಪಾದಗಳನ್ನು ಸ್ಪರ್ಶಿಸಿದಳು. ಆಗಿನ ತನ್ನ ಲಾವಣ್ಯ—ಆ ವೇಷ-ಭೂಷಣ-ಬಿಸಿಲುಗಾಲದಲ್ಲಿ ಹಿಮಾಲಯದಿಂದ ಪೂರ ಬರದೆ ನಿಲ್ಲುವದೇ? ಭಿಕ್ಷುಕನು ತನ್ನ ಕಡೆಗೆ ದಿಟ್ಟಿಸಿ ನೋಡತೊಡಗಿದ.

ಅವನು ತುಸು ಮುಂದಕ್ಕೆ ಸರಿದು ಶಿರಬಾಗಿಸಿದ ಕೂಡ ಆದರೆ ಅಷ್ಟರಲ್ಲಿ—

ಆಚೆಯ ಕೋಣೆಯೊಳಗಿಂದ ಬೇನೆಯಿಂದ ಬಳಲುತ್ತಿದ್ದ ತನ್ನ ತಾಯಿಯ ನರಳುವಿಕೆಯು ಕೇಳಬಂದಿತು. "ನನ್ನ ಮಿತ್ರ ಅಲ್ಲಿರುವ ನೆಂದು ಕಾಣುತ್ತದೆ" ಅನ್ನುತ್ತ ಅವನು ಅತ್ತಕಡೆಗೆ ಹೊರಟುಹೋದ. ಅವಳಿಗೆ ಸಮಾಧಾನವೆನಿಸುವಂತೆ, ಅವಳಿಗೆ ತನ್ನ ಶರೀರದ ಆಧಾರ ಕೊಟ್ಟು, ಅವಳ ಹತ್ತರವೇ ಇಡೀ ರಾತ್ರಿಯನ್ನು ಕಳೆದ.

ಅವನು ಅಲ್ಲಿಂದ ಮರುದಿವಸ ಮುಂಜಾನೆ ಹೋಗಿ ಬಿಟ್ಟ. ಆದರೆ ತನ್ನ ಮನೋಮಂದಿರದೊಳಗಿಂದ? ಛೆ! ಇಂದಿಗೆ ಮೂರುವರುಷಗಳಾದವು. ಪುಷ್ಪೆಯ ಮೌನವು ಅರಸನಿಗೆ ಸಮ್ಮತಿ ದರ್ಶಕವಾಗಿರಬಹುದೆಂದೆನಿಸಿತು. ಅವನು ಗೆಲುವಿನ ದನಿಯಲ್ಲಿ ಕೇಳಿದ "ಆಗುವಿಯಲ್ಲವೇ, ಅಲ್ಲಿಂದ ನೀನು ನನ್ನ ಪಟ್ಟದರಾಣಿ?"

ಪುಷ್ಪೆಯು ನಸುನಗುತ್ತ ಉತ್ತರ ಹೇಳಿದಳು " ಆಗುವೆ. ಆದರೆ ಒಂದು ಕಟ್ಟಿಗೆ ನೀವು ಒಪ್ಪಬೇಕು—"

"ದಿಗ್ವಿಜಯಿಯಾದ ಸಮ್ರಾಟನಿಗೆ ಕಟ್ಟುಗಳದೇನು ಪರಿವೆ?"

"ಅಂಥಾದ್ದೇನೂ ಕಠಿಣವಾಗಿಲ್ಲ ನನ್ನ ಕಟ್ಟು—"

"ಕಠಿಣವಾಗಿರಲೀ ಎಂತಹದೇ ಇರಲಿ; ಇಷ್ಟು ಸೈನ್ಯವಿದೆಯಲ್ಲ ನನ್ನ ಬೆನ್ನ ಹಿಂದೆ!"

"ಆದರೆ ಹೃದಯದಲ್ಲೇನಿದೆ?"

ಅರಸನು ಮನದಲ್ಲಿಯೇ ಬೆಚ್ಚಿದ. ಅವನು ವ್ಯಾಕುಲಸ್ವರದಲ್ಲಿ ಕೇಳಿದ. "ಏನಿದೆ, ನಿನ್ನ ಆ ಕಟ್ಟು?"

"ಸಂನ್ಯಾಸ ತೆಗೆದುಕೊಳ್ಳಬೇಕು ನೀವು. ಆ ಮೇಲೆ—"

ಎರಡನೆ ಕಡೆಯಿಂದ 'ನೀರು ನೀರು' ಎಂದು ಮತ್ತೆ ಧ್ವನಿ ಕೇಳ ಬಂದಿತು. 'ನಮೋ ಬುದ್ಧಾಯ, ನಮೋ ಬುದ್ಧಾಯ' ಅನ್ನುತ್ತ ಪುಷ್ಪೆಯು ಆ ಕಡೆಗೆ ಹೋಗಿಬಿಟ್ಟಳು.

\+ + + +

ಕವಿಯು ಮೃತ ಮಿತ್ರನ ಶೋಧಕ್ಕಾಗಿ ಮುಂಜಾವಿನ ನಸುಕಿನಲ್ಲಿ ರಣಾಂಗಣಕ್ಕೆ ಬಂದ. ಒಮ್ಮೆಲೆ ಒಂದು ಕಾರುಣ್ಯಮಯವಾದ ಸ್ಪಂದ ನವು ಅವನಿಗೆ ಕೇಳಬಂದಿತು. ಗಾಯಹೊಂದಿದವರಲ್ಲಿ ಯಾರಾದರೂ ನರ ಳುತ್ತಿರಬಹುದೇ? ಛೆ! ಯಾರೋ ಬಿಕ್ಕಿ ಬಿಕ್ಕಿ ಅಳುವಂತಿತ್ತು. ಕವಿಯು ಕಳವಳದಿಂದ ಅತ್ತಕಡೆಗೆ ಹೋಗಿ ದಯಾಮಯ ಧ್ವನಿಯಲ್ಲಿ ಕೇಳಿದ "ಯಾರಪ್ಪಾ ನೀನು? ಏನಾಗಿದೆ ನಿನಗೆ?"

ಕಂಬನಿ ಸುರಿಸುತ್ತಿರುವ ವ್ಯಕ್ತಿಯು ಮುಖವನ್ನು ಮೇಲಕ್ಕೆ ಮಾಡು ತ್ತಲೇ ಪ್ರಭಾತದ ಕಾಂತಿಹೀನವಾದ ಚಂದ್ರಪ್ರಕಾಶದಲ್ಲಿ ಕವಿಯು ನೋಡಿದ - ಸಾಮ್ರಾಟ ಪಾಷಾಣವರ್ಮ!

---

# ಚಂದ್ರಕಲೆ.



ತೆಂಗಿನ ಗರಿಗಳ ಗುಡಿಸಲಿನ ಮುಂದೆ ಕುಳಿತು ಅಂತೂನನು ದಾರಿ ಕಾಯುತ್ತಿದ್ದ. ಅಂದವಾದ ಚಂದ್ರಕಲೆಯನ್ನು ತನ್ನ ಆಟಿಗೆಯನ್ನಾಗಿ ಮಾಡಿಕೊಳ್ಳಲು ಹವಣಿಸುವ ಬಾಲಕನ ಚೀರಾಟದಂತೆ ದೂರದಿಂದ ಸಮುದ್ರದ ತೆರೆಗಳ ಸಪ್ಪಳವು ಕೇಳಬರುತ್ತಿತ್ತು. ಆದರೆ ಅಂತೂನನಿಗೆ ಯಾತರದೂ ಅರಿವು ಇರಲಿಲ್ಲ. ತೆಂಗಿನ ಗಿಡಗಳ ಬುಡದಲ್ಲಿ ನೆರಳು ಬೆಳದಿಂಗಳುಗಳು ಕಣ್ಣುಮುಚ್ಚಣಿಕೆಯ ಚಿನ್ನಾಟವಾಡುವಂತಿತ್ತು. ಆದರೆ ಅಂತೂನನು ಅವುಗಳ ಅಸ್ತಿತ್ವವನ್ನೇ ಮರೆತು ಹೋಗಿದ್ದ. ಆತನ ದೃಷ್ಟಿಯು ಗುಡಿಸಲಿಗೆ ಬರುವ ದಾರಿಯಲ್ಲಿ ನೆಟ್ಟಿತ್ತು. ಯಾವಾಗ್ಗೆ ಒಮ್ಮೆ ತನ್ನ ತಂದೆ ಅಂಗಡಿಯನ್ನು ಇಕ್ಕಿಕೊಂಡು ಮನೆಗೆ ಬರುವನೋ, ಅಲ್ಲಿಂದ—

ಸಮೀಪದಲ್ಲಿಯೇ ಗಿಡಗಳ ಗುಂಪಿನಲ್ಲಿ 'ಸಳಸಳ' ಸಪ್ಪಳವಾಯಿತು. ಆದರೆ ದಾರಿಯ ಮೇಲೆ ಯಾರೂ ಬರುತ್ತಿರಲಿಲ್ಲ ತನ್ನ ತಂದೆ ಅಂಗಡಿಯನ್ನು ಇಷ್ಟು ತಡವಾಗಿ ಯಾಕೆ ಮುಚ್ಚುತ್ತಿರಬಹುದೆಂಬ ವಿಚಾರವು ಅವನಿಗೆ ತಿಳಿಯದೇ ಹೋಯಿತು.

ಅವನು ಮುಖವನ್ನು ಮೇಲಕ್ಕೆತ್ತಿ ಚಂದ್ರನ ಕಡೆಗೆ ನೋಡಿದ. ಇಂದಿನವರೆಗೂ ತನಗೆ ಚಂದ್ರನು— ಮೇಘಗಳಾಚೆಯಲ್ಲಿ ಅಡಗಿಕೊಳ್ಳುವ ಚಂದ್ರ, ತಾರೆಗಳೇ ಸಿಂಪುಗಳಾಗಿರುವ ಆಕಾಶ ಸಮುದ್ರದ ಉಸುಕಿನಲ್ಲಿ ನಲಿದಾಡುವ ಚಂದ್ರ, ಸಾವಿರಾರು ರೀತಿಯಿಂದ ಅಲ್ಹಾದವನ್ನುಂಟು ಮಾಡುವ ಚಂದ್ರ, ತನ್ನ ಆಟಕ್ಕೆ ಸಂಗಡಿಗನಾಗಿದ್ದ. ಆದರೆ ಇಂದು ಅವನಿಗೆ ಯಾಕೋ ಬೇರೆಯಾಗಿದ್ದಂತೆ ಅನಿಸಹತ್ತಿತ್ತು "ಚಂದ್ರನ ಮೇಲೆ ಪರ್ವತಗಳಿವೆ. ಇಂಗ್ರೇಜೀ ಶಾಲೆಗೆ ಹೋದನಂತರ ಅವುಗಳನ್ನು ನೀವು

ದೊಡ್ಡ ದುರ್ಬೀನಿನಲ್ಲಿ ಕಾಣುವಿರಿ" ಎಂದು ಅವರ ಶಾಲೆಯ ಮುಖ್ಯಾಧ್ಯಾಪಕರು ಹೇಳಿದ್ದು ಅವನಿಗೆ ನೆನಪಾಯಿತು. ಇಂಗ್ರೇಜಿ ಶಾಲೆ–ದೊಡ್ಡ ದೊಡ್ಡ ದುರ್ಬೀನಿಗಳು—ಪರೀಕ್ಷೆಗಳು ಇನ್ನೆಷ್ಟೋ ಸಂಗತಿಗಳಿಂದ ಆತನ ಮನಸ್ಸು ಮುಂದಿನ ಸುಖಸ್ವಪ್ನಗಳಿಂದ ಅರಳಿಹೋಯಿತು.

ಆ ಮೂಲಕವೇ, ಅಂಗಣದಲ್ಲಿ ಹೆಜ್ಜೆಯ ಸಪ್ಪಳ ಕೇಳಬರುವರೆಗೂ ತಂದೆಯು ಬಂದದ್ದು ಅಂತೂನನಿಗೆ ತಿಳಿಯದೆ ಹೋಯಿತು. ಅವನ ತಂದೆಯು ಬಂದು, ಅವನನ್ನು ನೋಡಿ ನಸುನಕ್ಕು ಗುಡಿಸಲಿನ ಒಳಕ್ಕೆ ಹೋಗಿದ್ದ. ಒಳಗಿನಿಂದ ಅವನ ತಾಯಿಯ ಧ್ವನಿಯು ಕೇಳಬರುತ್ತಿತ್ತು.

"ಎಷ್ಟು ತಡವಾಯಿತು ಇಂದು, ಬರಲಿಕ್ಕೆ?"

"ಈ ವ್ಯಾಪಾರವೆಂದರೆ ಸಂಜೆಯ ಮುಂದೆಯೇ ಚನ್ನಾಗಿ ನಡಿಯುವಂಥಾದ್ದು"

"ಅಂತೂನನಂತೂ ಹಟವನ್ನೇ ಹಿಡಿದಿರುವನಲ್ಲ!"

"ನಮ್ಮ ಹುಡುಗನ ಇಚ್ಛೆ ನಾವೇ ಪೂರೈಸಬೇಕಲ್ಲವೇನು?''

"ಅದೆಲ್ಲ ಸರಿ. ಆದರೆ ರೊಕ್ಕವೇನು ಈ ತೆಂಗಿನ ಗಿಡಗಳಿಗೆ ಹತ್ತಿ ಕೊಂಡಿವೆ ಏನು?''

ತನ್ನ ತಂದೆಯ ಗಟ್ಟಿಯಾದ ನಗುವು ಅಂತೂನನಿಗೆ ಹೊರಗೆಯೇ ಕೇಳಿಸಿತು.

"ನಗಲಿಕ್ಕೇನಾಯಿತು?"

"ರೊಕ್ಕ ಏನೂ ತೆಂಗಿನ ಗಿಡಗಳಿಗೆ ಹತ್ತಿಲ್ಲವೆಂದಿಯಲ್ಲ, ನೀನು ಈಗಲೆ?"

"ಹೌದು ಸುಳ್ಳೇನು ನನ್ನ ಮಾತು?''

"ರೊಕ್ಕ ಹತ್ತಿಕೊಂಡಿರುವದು ತೆಂಗಿನ ಗಿಡಕ್ಕೇನೆ!"

ತಂದೆಯ ಕೈಯಲ್ಲಿಯ ರೊಕ್ಕದ 'ಝಣಝಣ' ಸಪ್ಪಳವು ಅಂತೂನನ ಕಿವಿಯಮೇಲೆ ಬಿದ್ದೊಡನೆಯೇ ಆತನ ಹೃದಯವು ಆನಂದದಿಂದ ಕುಣಿಯಹತ್ತಿತು. ಒಳಗಡೆಗೆ ತನ್ನ ತಾಯಿಯು ಕೇಳುತ್ತಿದ್ದಳು.

"ಆದರೆ, ಇಂಗ್ರೇಜಿ ಶಾಲೆಯಲ್ಲಿ ಫೀ ಬಹಳ ಅಲ್ಲವೇನು? ಇದಲ್ಲದೆ ಪುಸ್ತಕಬೇಕು---"

"ಇರಲೊಲ್ಲದೇಕೆ, ಫೀ ಬಹಳ. ಅವೆಲ್ಲವುಗಳಿಗಿಂತಲೂ ದೊಡ್ಡ ಗಿರಾಕಿಯನ್ನೇ ಹಿಡಿದು ಬಿಟ್ಟಿರುವೆ."

"ಎಲ್ಲಿಯದು ಅದು?"

"ಎಲ್ಲಿಯದಾದರೂ ಇರಲೊಲ್ಲದೇಕೆ? ತನ್ನ ಜೊತೆಯಲ್ಲಿ ನಾಲ್ಕುಜನ ಇಲ್ಲದೆ ಎಂದೂ ಬರುವದಿಲ್ಲ ಸವಾರಿ. ಅಂಗಡಿಗೆ ಪ್ರತಿದಿವಸ ಹತ್ತು ಹನ್ನೆರಡು ಆಣೆಯಾದರೂ ಸಹಜ—"

"ಪ್ರತಿದಿವಸ ಹನ್ನೆರಡಾಣೆ" ತನ್ನ ತಾಯಿಯ ಸ್ವರದಲ್ಲಿಯ ಆನಂದವು ಅಂತೂನನ ರೋಮರೋಮಗಳಲ್ಲಿಯೂ ನರ್ತಿಸಹತ್ತಿತ್ತು. ಆನಂದದಲ್ಲಿ ಆವನು ಮೇಲಕ್ಕೆ ನೋಡಿದ. ಚಂದ್ರಬಿಂಬವು ಅಸ್ತವಾಗಹತ್ತಿತು. ಕತ್ತಲೆಯಲ್ಲಿ ಸಮುದ್ರದ ಸಪ್ಪಳವು ಹಿಂಸ್ರಪಶುವಿನ ಗುರುಗುರಿಕೆಯಂತೆ ನಡುನಡುವೆ ಕೇಳಬರುತ್ತಿತ್ತು ಆದರೆ "ನಾಳೆ ಇಂಗ್ರೇಜಿ ಶಾಲೆಗೆ ಹೋಗುವೆ" ಎಂಬ ವಿಚಾರದಿಂದ ಆತನಮನದಲ್ಲಿ ಹುಣ್ಣಿವೆಯ ಬೆಳದಿಂಗಳು ಅರಳಿತು. ಸಮುದ್ರದ ಸಪ್ಪಳವು ಚಿಕ್ಕಮಕ್ಕಳ ಆಟದ ವೇಳೆಯಲ್ಲಿಯ ಆನಂದದ ಚೀತ್ಕಾರದಂತೆ ಅವನಿಗೆ ಭಾಸವಾಯಿತು.

ಒಂದು ಬೆಳ್ಳಿಯ ಉಡದಾರ ಮತ್ತು ಒಂದು ಕೆಂಪು ಅರಿವೆಯ ಲಂಗೋಟಿ ಇವೇ ಅಂತೂನನ ತಂದೆಯ ವೈಭವ. ಆ ಮೂಲಕ ಶಾಲೆಯಲ್ಲಿ ಸೇರುವಾಗ ಅಂತೂನನಿಗೆ ಮುಖವನ್ನು ಕೆಳಗೆ ಮಾಡಿಕೊಂಡೇ ಹೋಗಬೇಕಾಯಿತು. ಮುಖ್ಯಾಧ್ಯಾಪಕರ ಕೋಣೆ,— ಅದರಲ್ಲಿಯೂ, ಸೂಟುಬೂಟುಗಳನ್ನು ಧರಿಸಿ ಕಣ್ಣುಗಳಿಗೆ ಕನ್ನಡಕಗಳನ್ನೇರಿಸಿಕೊಂಡ

ಮೂರ್ತಿಯನ್ನು ಕಂಡ ಮೇಲಂತೂ, ಅಂತೂನನಿಗೆ ಅಲ್ಲಿಂದ ಒಮ್ಮೆಲೆ ಓಡಿಹೋಗಬೇಕೆಂದೆನಿಸಿತು. ಆದರೆ ಅದು ಶಕ್ಯವಿರಲಿಲ್ಲ.

ಶಾಲೆಯ ಸಿಪಾಯಿಯು ಅಂತೂನನ್ನು ಅವನ ವರ್ಗಕ್ಕೆ ಕರೆದು ಕೊಂಡು ಬಂದಾಗ ಭಯಭೀತನಾಗಿಯೇ ಅವನು ಒಳಕ್ಕೆ ಹೋದ. ಕೂಡಲೆ ಅರವತ್ತು ಎಪ್ಪತ್ತು ಚಿಕ್ಕ ಚಿಕ್ಕ ಹೊಳೆಯುವ ಕಣ್ಣುಗಳ ಕಟಾಕ್ಷವನ್ನು ಆತನಿಗೆ ಒಮ್ಮೆಲೆ ಎದುರಿಸಬೇಕಾಯಿತು. ವ್ಯಾಕುಲದೃಷ್ಟಿ ಯಿಂದ ಅಂತೂನನು ಮಾಸ್ತರರ ಖುರ್ಚಿಯ ಕಡೆಗೆ ನೋಡಿದ. ಕಲ್ಲು ಮೂರ್ತಿಯಂತೆ ಸ್ವಸ್ಥವಾಗಿ ಅಧ್ಯಾಪಕನು ಖುರ್ಚಿಯಲ್ಲಿ ಕುಳಿತುಕೊಂ ಡಿದ್ದ. ಭಯಚಕಿತ ದೃಷ್ಟಿಯಿಂದ ಇಡೀ ವರ್ಗವನ್ನು ನಿರೀಕ್ಷಿಸುತ್ತಿರುವಾಗ ಅಂತೂನನ ಕಾಲುಗಳು ಥರಥರ ನಡುಗುತ್ತಿದ್ದವು. ಇಷ್ಟರಲ್ಲಿಯೂ ದೂರಿ ನಿಂದ, ಒಳ್ಳೇ ಚನ್ನಾಗಿ ಅರಿವೆಗಳನ್ನು ಧರಿಸಿದ, ಜರದ ಟೊಪ್ಪಿಗೆಯ, ಹುಡುಗನೊಬ್ಬನು, ತನ್ನ ಸಲುವಾಗಿ ಸ್ಥಳಮಾಡಿ ಸನ್ನೆ ಮಾಡಿ ಕರೆ ಯುತ್ತಿರುವದನ್ನು ನೋಡಿದಕೂಡಲೇ, ಅಂತೂನನಿಗೆ ಸಮುದ್ರದಲ್ಲಿ ಮುಳು ಗುತ್ತಿರುವ ಮನುಷ್ಯನಿಗೆ ನಾವನ್ನು ಕಂಡಂತೆ ಅನಿಸಿತು. ಇಡೀ ದಿವಸ ಅಂತೂನನು ಆ ಹುಡುಗನ ಮುಖವನ್ನು ಕೃತಜ್ಞತೆಯಿಂದ ತುಂಬಿದ ಕಣ್ಣುಗಳಿಂದ ನೋಡುತ್ತಲೇ ಇದ್ದ.

× × × × ×

ಅಂದಿನಿಂದಲೇ ವಸಂತ ಅಂತೂನರ ಗೆಳೆತನವು ಅತಿಶಯವಾಗಿ ಕೂಡಿಹೋಯಿತು. ಅಂತೂನನ ಕೊರಳಲ್ಲಿಯ 'ಕ್ರಾಸು' ಎಷ್ಟು ಚಂದ ವಾಗಿ ಕಾಣುವದೆಂಬದನ್ನು ವಸಂತನು ತನ್ನ ತಾಯಿಯ ಮುಂದೆ ವರ್ಣಿ ಸುವಂತೆ, ಅಂತೂನನಾದರೂ ತನ್ನ ತಾಯಿಯ ಮುಂದೆ ವಸಂತನ ಕೈ ಮೇಲೆ ಹಂಚಿಯ ಬೊಟ್ಟಿನಿಂದ ಬರೆದ ರಾಮನಾಮಾಕ್ಷರಗಳನ್ನು ವರ್ಣಿ ಸುತ್ತಿದ್ದ. ಇಬ್ಬರೂ ವರ್ಗದಲ್ಲಿ ಒಬ್ಬರೊಬ್ಬರ ಹತ್ತಿರವೇ ಕುಳಿತು ಕೊಳ್ಳುತ್ತಿದ್ದರು ನಡುವಿನ ಬಿಡುವಿನಲ್ಲಿ ಕೂಡಿಯೇ ಆಡುವರು. ಇಷ್ಟೇ ಅಲ್ಲದೆ 'ಹು-ತೂ-ತು' ಆಡುವಾಗ್ಗೆ ಇಬ್ಬರೂ ಯಾವಾಗಲೂ ಒಂದೇ ಕಡೆ

ಯಿಂದಲೇ ಆಡುವರು. ಮಾಸ್ತರರ ಇಚ್ಛೆಯ ಮೂಲಕ ಒಬ್ಬರೊಬ್ಬರಿಂದ ಬಿಡುಗಡೆಯಾಗಿ ಎದುರಾಳಿಗಳಾಗಿ ಆಡಬೇಕಾದಾಗ ಅಂತೂನನ್ನು ಹೊಡೆಯುವದು ವಸಂತನಿಗೆ ಕಷ್ಟವಾಗುವಷ್ಟೇ ಅಂತೂನನಿಗೂ ಆಗುತ್ತಿತ್ತು ಅಂತೂನನಂತೂ ಅಂಥ ಪ್ರಸಂಗದಲ್ಲಿ ವಸಂತನ ಮೈಯನ್ನು ಕೂಡ ಮುಟ್ಟುತ್ತಿರಲಿಲ್ಲ

ವರ್ಗದಲ್ಲಿಯೂ ಕೂಡ ಮಾಸ್ತರರಿಂದ ಹೊಗಳಿಸಿಕೊಳ್ಳುವಷ್ಟು ಅವರ ಗೆಳೆತನವು ಆರು ತಿಂಗಳ ಅವಧಿಯಲ್ಲಿಯೇ ಬೆಳೆಯಿತು. ಒಮ್ಮೆ ಮಾಸ್ತರರು ಹೇಳುತ್ತಿದ್ದರು. "ಮೊದಲಿನ ಕಾಲದಲ್ಲಿ ಪತ್ರಗಳನ್ನು ಬರೆಯುವಾಗ 'ಶುಕ್ಲೇಂದುವಿನಂತೆ ನಮ್ಮಲ್ಲಿ ಪ್ರೇಮ ವೃದ್ಧಿಯಾಗಬೇಕು' ಎಂದು ಬರೆಯುತ್ತಿದ್ದರು"

"ಶುಕ್ಲೇಂದುವಿನಂತೆ ಅಂದರೆ ಹ್ಯಾಗರೀ ಮಾಸ್ತರ" ಒಬ್ಬ ಹುಡುಗ ಶಂಕೆಯನ್ನೆತ್ತಿದ.

"ಅಂತೂ ವಸಂತರಂತೆ!" ಮಾಸ್ತರರು ಒಮ್ಮೆಲೆ ಹೇಳಿಬಿಟ್ಟರು. ಇಡೀ ವರ್ಗದ ಮೇಲೆ ನಗುವಿನ ಲಹರಿಹಾಯ್ದು ಹೋಯಿತು. ಮಧ್ಯಾಹ್ನದ ಬಿಸಿಲು ಹೊರಗೆ ರಣ ರಣ ಉರಿಯುತ್ತಿದ್ದರೂ ತಾನು ಬೆಳದಿಂಗಳಿನಲ್ಲಿ ರಮಿಸುತ್ತಿರುವಂತೆ ಅಂತೂನನಿಗೆ ಭಾಸವಾಯಿತು. ಆ ತಾಸು ಮುಗಿದಕೂಡಲೆ ಅವನು ವಸಂತನಿಗೆ ಅಂದ—

"ನಿನ್ನನ್ನು ಕರೆಯಲಿಕ್ಕೆ ನನಗೆ ಇಂದು ಹೊಸದೊಂದು ಹೆಸರು ಸಿಕ್ಕಿದೆ!"

"ಯಾವದು ಅದು?"

"ಶುಕ್ಲೇಂದು!"

ಆದರೆ ಶುಕ್ಲೇಂದುವಿಗೆ ಪೂರ್ಣೇಂದುವಿನ ಅನುಭವವು ಸಿಗುವದು ಒಂದು ದಿವಸದ ಪೂರ್ತಿಯೇ ಎಂಬುದನ್ನು ಅಂತೂನನು ಮರೆತು

ಬಿಟ್ಟ. ಒಂದು ದಿವಸ ವಸಂತನು ವರ್ಗದಲ್ಲಿ ಬಂದವನೇ ಸರಳವಾಗಿ ಎರಡನೇ ಕಡೆಗೆ ಹೋಗಿ ಕುಳಿತುಕೊಂಡು ಬಿಟ್ಟ. ಪುಸ್ತಕದ ನೆವ ಮುಂದುಮಾಡಿ ಅಂತೂನನು ಅವನ ಕಡೆಗೆ ಹೋದರೂ ವಸಂತನು ಮೋರೆ ತಿರಿವಿದ. ನಡುವಿನ ಬಿಡುವು ಆಗುವ ವರೆಗೆ ಎರಡು ತಾಸುಗಳು ಅಂತೂನನಿಗೆ ಎರಡು ಯುಗಗಳಂತೆ ಅನಿಸಿದವು. ಬಿಡುವಾದ ಕೂಡಲೇ ವಸಂತನು ತನ್ನನ್ನು ತಪ್ಪಿಸಿ ಹೊರಗೆ ಹೋಗಬಹುದೆಂಬ ವಿಚಾರದೊಂದಿಗೆ ಅವನ ಕಣ್ಣುಗಳಲ್ಲಿ ನೀರು ತುಂಬಿದವು. ಕೂಡಲೇ ಅಂತೂನನು ವಸಂತನ ಹತ್ತಿರಕ್ಕೆ ಹೋಗಿ ಅವನ ಕೈ ಗಟ್ಟಿಯಾಗಿ ಹಿಡಿದುಕೊಂಡ. ಲೋಹಚುಂಬಕದಿಂದ ಎಳೆಯಲ್ಪಟ್ಟ, ಕಬ್ಬಿಣದಲ್ಲಿ ಕೂಡ ಹೋಗುವ ಶಕ್ತಿ ಯೆಲ್ಲಿಂದ ಬರಬೇಕು? ವಸಂತನಾದರೂ ತನ್ನ ಕೈಯನ್ನು ಅಲ್ಲಿಯೇ ಬಿಟ್ಟು ಸುಮ್ಮನೆ ನಿಂತುಕೊಂಡ.

ಇಬ್ಬರೂ ಮಾತಾಡದೆ ಹೊರಗೆ ಬಂದರು. ವ್ಯಾಯಾಮಶಾಲೆಯ ಹಿಂದೆ ಹೋಗ ಹೋಗುತ್ತಲೇ, ನಡುನಡುವೆ ಬಿಕ್ಕುತ್ತ ಕಂಪಿಸುವ ದನಿಯಲ್ಲಿ "ವಸಂತ! "ಎಂದು ಕರೆದ. ಭೂಕಂಪವಾದ ನಂತರ ಕಲ್ಲುಪ್ರದೇಶದಲ್ಲಿಯಾದರೂ ನೀರು ನಿಲ್ಲುವದು. ಅಂತೂನನ ಸ್ವರದಲ್ಲಿಯ ನಡುಕಿನಿಂದ ವಸಂತನ ಮನಕರಗಿತು.

"ವಸಂತ— ವಸಂತ, ನಾನೇನು ತಪ್ಪು ಮಾಡಿದೆ ಹೇಳು."— ವಸಂತನು ಗೊಂದಲದಲ್ಲಿ ಬಿದ್ದ. "ಇಂದು ನೀನು ನನ್ನನ್ನು ಬಿಟ್ಟು ದೂರ ಯಾಕೆ ಕುಳಿತುಕೊಂಡೆ?"

"ನನ್ನ ತಾಯಿ ಹೇಳಿದಳು."—

"ಏನೆಂದು?"

"ನಿನ್ನೊಡನೆ ಮಾತು ಕೂಡ ಆಡಬೇಡವೆಂದು"

"ಅದೇಕೆ? ನಾನು ಕ್ರಿಸ್ತೀಯನೆಂದೇನು, ಅವಳು ಹಾಗೆ ಹೇಳಿದ್ದು?"

"ಉಹುಂ. ನನ್ನ ತಂದೆ ಪ್ರತಿನಿತ್ಯವೂ ನನ್ನ ತಾಯಿಯನ್ನು ಹೊಡೆಯುವ –"

ಅಂತೂನನ ಮುಖದ ಮೇಲಿನ ಆಶ್ಚರ್ಯದ ಅರ್ಥವು ವಸಂತನಿಗೆ ತಿಳಿಯಿತು. "ನಿನ್ನ ತಂದೆ ನಿನ್ನ ತಾಯಿಯನ್ನು ಹೊಡೆಯುವದಾದರೆ, ಶಿಕ್ಷೆಯಾಗುವದು ನನಗೆ! ಇದೊಳ್ಳೆಯ ನ್ಯಾಯ!" ಎಂ ದು ಅವನ ಮುಖಮುದ್ರೆಯು ಹೇಳುವಂತಿತ್ತು.

"ನನ್ನ ತಂದೆ ಹೀಗೆಂದಿಗೂ ಮೊದಲು ಅವಳನ್ನು ಹೊಡೆಯುತ್ತಿರಲಿಲ್ಲ" ಅಂತೂನನು ಸುಮ್ಮನೆ ಕೇಳುತ್ತಲಿದ್ದ.

"ಈಗ ಆರು ತಿಂಗಳಾದವು. ಅವರು ಹೊರಗೆ ಹೋಗಿ ಬಂದು—"

"ಹೊರಗೆ ಅಂದರೆ ಎಲ್ಲಿಗೆ ಹೋಗುವರು?"

"ನಿನ್ನ ತಂದೆಯ ಅಂಗಡಿಗೆ!"

ಅಂತೂನನು ಕೆಳಗೆ ನೋಡುತ್ತ ವಿಚಾರಮಾಡತೊಡಗಿದ

"ಮನೆಗೆ ಬಂದ ಕೂಡಲೆ ಬಡಬಡಿಸಹತ್ತುವರು. ನನ್ನ ತಾಯಿಯನ್ನು ಮನಬಂದಂತೆ ಹೊಡೆಯುವರು. ನಿನ್ನಿನ ದಿವಸ ನನ್ನ ತಾಯಿ ಎಷ್ಟೋ ವೇಳೆ ಅಳುತ್ತ ಕುಳಿತುಬಿಟ್ಟಿದ್ದಳು. ನನ್ನ ತಂದೆಯವರು ನಿಮ್ಮ ಅಂಗಡಿಗೆ ಹೋಗುವರೆಂದು ಅವಳೇ ಹೇಳಿದಳು ನನಗೆ—"

"ಅವರು ಅಲ್ಲಿಗೆ ಹೋಗದಂತೆ ಮಾಡಿದರೆ?"

ಆಶ್ಚರ್ಯಬಡುವದು ಈಗ ವಸಂತನ ಮೇಲೆ ಬಂದಿತು. ಈ ಹತ್ತು ವರ್ಷದ ಪೋರನು, ತನ್ನ ತಂದೆಯ ಸೆರೆಯ ಚಟವನ್ನು ಕಳೆಯುವನೇ? ತನ್ನ ತಾಯಿಯ ಪ್ರಯತ್ನಗಳೆಲ್ಲವೂ ನಿಷ್ಫಲವಾಗಿದ್ದಾಗ ಈ ಅಂತೂನ—

"ಅಲ್ಲಿಂದಾದರೂ ನನ್ನ ಹತ್ತಿರ ಬಂದು ಕೂಡ್ರುವಿಯಲ್ಲವೆ?"

"ಓ, ಹೋ!"

ಆ ಮೇಲಿನ ತಾಸು ಭೂಗೋಲದ ಪಾಠದ್ದಿತ್ತು. ಪೃಥ್ವಿಯ ಮೇಲೆ ಗ್ರಹಣಗಳು ಹೇಗೆ ಆಗುತ್ತವೆಂಬುದನ್ನು ಶಿಕ್ಷಕರು ಹೇಳುತ್ತಿರುವಾಗ

ಅಂತೂನನಿಗೆ ಅನಿಸಿತು.—ತನ್ನ ಮತ್ತು ವಸಂತನ ಗೆಳೆತನಕ್ಕಾದರೂ ಗ್ರಹಣ ಹಿಡಿದಿದೆ. ಆದರೆ ಅವನು ಒಮ್ಮೆಲೆ ಸಮಾಧಾನ ಹೇಳಿಕೊಳ್ಳುತ್ತಿದ್ದ. "ಚಂದ್ರನ ಗ್ರಹಣವೇನು, ಕಡೆತನಕ ನಿಲ್ಲುವದೇ? ಕೂಡಲೆ ಬಿಟ್ಟು ಹೋಗುವದು!"

ಆ ದಿವಸ ರಾತ್ರಿ ಊಟವಾದನಂತರ ಅಂತೂನನು ತನ್ನ ತಂದೆಗೆ ಕೇಳಿದ—

"ಜನರು, ಸೆರೆ ಯಾಕೆ ಕುಡಿಯುವರು, ಅಪ್ಪ?"

"ಇಂಗ್ರೇಜಿ ಶಾಲೆಯಲ್ಲಿ ನಿಮಗೆ ಇದನ್ನೇ ಕಲಿಸುವರೇನು?"

"ಆದರೆ—"

"ಆದರೆ ಏನು?"

"ಆ ವಸಂತನ ತಂದೆ ನಮ್ಮ ಅಂಗಡಿಗೆ ಬರುವನಲ್ಲವೇ?"

"ಹೌದು"

"ಅವನಿಗೆ ನಮ್ಮ ಅಂಗಡಿಯಲ್ಲಿ ಬರಗೊಡದಿದ್ದರೆ?"

"ಎರಡನೇ ಅಂಗಡಿಯ ಕಡೆಗೆ ಹೋಗುವ, ಅವ!" ಅಂತೂನನಿಗೆ ವಿಚಾರಹರಿಯದಾಯಿತು.

"ಮತ್ತು ನೀನು ಶಾಲೆಯನ್ನಾದರೂ ಬಿಡಬೇಕಾಗುವದು"

"ಅದೇಕೆ?"

"ಇಂಥ ದೊಡ್ಡ ಗಿರಾಕಿ ನಮ್ಮ ಕೈಬಿಟ್ಟು ಹೋದರೆ ನಿನಗೆ ಶಾಲೆ ಕಲಿಯಲಿಕ್ಕೆ ರೊಕ್ಕವೆಲ್ಲಿಂದ ಬರಬೇಕು?"

ವಸಂತನ ತಂದೆಯು ತಮ್ಮ ಅಂಗಡಿಯಲ್ಲಿ ಸೆರೆ ಕುಡಿಯಲಿಕ್ಕೆ ಬಂದರೆ ಮಾತ್ರ ತನಗೆ ಶಾಲೆ ಕಲಿಯಲಿಕ್ಕೆ ಸಿಗುವದು! ಅಂತೂನನಿಗೆ ಈ ವಿಚಿತ್ರ ಸಂಬಂಧದ ಅರ್ಥವೇ ತಿಳಿಯಲಿಲ್ಲ. ವಿಚಾರ ಮಾಡಿ ಮಾಡಿ ಆತನ ತಲೆ ನೋಯತೊಡಗಿತು. ನಾಳೆ ಯಾವ ಮೋರೆಯಿಂದ ವಸಂ

ತನಿಗೆ ಭೆಟ್ಟಿಯಾಗುವದು, ಎಂಬ ಪ್ರಶ್ನೆ ಆತನ ಮುಂದೆ ನಿಂತಿತು. ನಿದ್ರೆ ಬರದೆ ಇದ್ದುದರಿಂದ ಹಾಸಿಗೆಯ ಮೇಲೆ ತಳಮಳಿಸುತ್ತ ಮಗ್ಗುಲಿನಿಂದ ಮಗ್ಗುಲಿಗೆ ಹೊರಳಾಡಹತ್ತಿದ. ಏನೂ ತೋಚದೆ ಕಡೆಗೆ ಅವನು ಎದ್ದು ಗುಡಿಸಲಿನ ಹೊರಕ್ಕೆ ಬಂದ.

ಮಧ್ಯರಾತ್ರಿಯ ಸಮಯವು ಮೀರಿಹೋಗಿತ್ತು. ಶುಭ್ರವಾದ ಬೆಳದಿಂಗಳಿನಲ್ಲಿ ಇಡೀ ಜಗವೆಲ್ಲವೂ ಮುಣುಗಿ ಏಳುತ್ತಿತ್ತು. ಆದರೆ ತನ್ನ ಮನಸ್ಸಿನಲ್ಲಿ ಕತ್ತಲೆಯೇ ಗಾಢತರವಾಗಹತ್ತಿದೆ ಎಂದೆನಿಸಿತು ಅಂತೂನನಿಗೆ. ಅವನು ಕಣ್ಣು ಮುಚ್ಚಿಕೊಂಡು ಸುಮ್ಮನೆ ನಿಂತುಕೊಂಡುಬಿಟ್ಟ. ಸಮುದ್ರದ ಭಯಂಕರ ಸಪ್ಪಳವನ್ನು ಕೇಳಿ ಆತನ ಮೈಮೇಲೆ ನವಿರೆದ್ದವು. ಸಾವಿರಾರು ಸೆರೆಕುಡುಕರು, ಬಾಯಿಗೆ ಬಂದಂತೆ ಬಡಬಡಿಸುತ್ತ, ಎದೆ ಎದೆ ಬಡೆದುಕೊಳ್ಳುತ್ತ ತನ್ನೆಡೆಗೆ ಬರುತ್ತಿರುವರೇನೋ ಎಂದೆನಿಸಿ, ಧಡಧಡ ಅನ್ನುವ ಎದೆಯ ಮೇಲೆ ತನ್ನ ಕೈ ಇರಿಸಿಕೊಂಡು ಅಂತೂನನು ಗುಡಿಸಲನ್ನು ವಿಷಣ್ಣಮನಸ್ಕನಾಗಿ ಸೇರಿದ.

— — —

# ಸೇತುವೆ.



**ಎದುರದಡದಿ ನಿಂದು ಬಿದಿರಕೊಳಲ ತನ್ನ।**
**ಅಧರದಿ ನುಡಿಸುವ ಚದುರ ರಂಗನ ಕಂಡೆ॥**

ಅದೇ ಶಾಲೆಬಿಟ್ಟು ಬಂದು ಕುಸುಮೆಯು ರಾಗದ ಪೆಟ್ಟಿಗೆಯನ್ನು ಬಾರಿಸುತ್ತ ಹಾಡುತ್ತಿದ್ದಳು. ಸಂಗೀತದಿಂದ ದಣುವು ಪರಿಹಾರವಾಗುವ ದೆನ್ನುವರು. ಆದರೆ ನಡುಮನೆಯಲ್ಲಿ ಬಿಳಿಯ ಪತ್ತಲವನ್ನೊಂದು ಹೊದ್ದು ಕೊಂಡು ಮಲಗಿದ್ದ ಅಜ್ಜಿಗೆ ಮಾತ್ರ ಆ ರಾಗದ ಪೆಟ್ಟಿಗೆಯಿಂದ ತಲೆ ಬೇಸರವಾಯಿತು. ಅವರು ಮನಸ್ಸಿನಲ್ಲಿಯೇ ಅಂದುಕೊಂಡರು. "ಶಾಲೆ ಬಿಟ್ಟು ಬಂದ ಕೂಡಲೆ, ಈ ಪೋರಿ, ಸುರುವುಮಾಡುವಳು, ಆ ರಾಗದ ಪೆಟ್ಟಿಗೆಯನ್ನ. ಸುಮ್ಮನೆ, ಪುರಾಣಕ್ಕೆ ಹೋಗಿ ಬಿಟ್ಟರೆ ಒಳ್ಳೆಯದು!" ಅಷ್ಟರಲ್ಲಿಯೇ ಚಿಕ್ಕ ರಾಮನು ಕೈಯಲ್ಲಿ ಬಣ್ಣದ ಜಾಹಿರಾತೊಂದನ್ನು ತೆಗೆದುಕೊಂಡು ಕುಣಿಯುತ್ತ ಬಂದ. "ಅಜ್ಜೀ, ಅಜ್ಜೀ, ಇದು ನೋಡು, ಸಿನೇಮಾ ಎಷ್ಟು ಚಂದ ಅದ ಇವತ್ತ" ಓಡುತ್ತೋಡುತ್ತ ಹೋಗಿ ಅವ ಅಜ್ಜಿಯ ಕಾಲುಗಳಿಗೆ ಅಟ್ಟೆಮುಟ್ಟೆಯಾಗಿ ಬಿಗಿದುಕೊಳ್ಳುವವನೇ! ಆದರೆ ಅಜ್ಜಿಯ ಮುಖಚರ್ಯೆಯನ್ನು ನೋಡಿದ ಕೂಡಲೆ ಆತನ ಎಳೆಮನ ಸ್ಸಿನಲ್ಲಿ ಭೀತಿಯುಂಟಾಗಿ, ಅವನು 'ಅಕ್ಕಾ, ಅಕ್ಕಾ' ಎನ್ನುತ್ತ, ಕುಸುಮೆಯ ಕಡೆಗೆ ಧಾವಿಸಿದ.

ಅಜ್ಜಿಯವರು ಒಳಮನೆಯಲ್ಲಿ ಹೋಗಿ ಒಂದು ಪಾತ್ರೆಯಲ್ಲಿ ಅಕ್ಕಿ ಯನ್ನು ಸುರುವಿಕೊಂಡು "ನಾನೀಗ ದೇವರಿಗೆ ಹೋಗಿ ಬರುವೆ" ಎಂದು ಸೊಸೆಗೆ ಹೇಳಲಿಕ್ಕೆಂದು ತಿರುಗುವಷ್ಟರಲ್ಲಿ ಅವರ ಕಿವಿಗೆ ಶಬ್ದ ಕೇಳ ಬಂದವು— "ಒಂದಿಷ್ಟು ಕೂಸು ತೆಗೆದುಕೊಳ್ಳಬಾರದೆ? ಒಂದೇ ಸವನೆ ಕಿರಿಕಿರಿ ಮಾಡಹತ್ತಿದೆ. ಇಂದು ಅಡಿಗೆಯಾದರೂ ಒಂದಿಷ್ಟು ಬೇಗನೆಯೇ ಆಗಬೇಕಾಗಿದೆ. ಸಿನೇಮಾಕ್ಕೆ—"

ಅತ್ತೆಯ ಮುಖಚರ್ಯೆಯನ್ನು ನೋಡಿದ ಕೂಡಲೆ ಸೊಸೆಯು ಸುಮ್ಮನಾದಳು. ಅತ್ತೆಗೆ ಅನಿಸಹತ್ತಿತು.—"ನನಗೆ ಪುರಾಣವಿಲ್ಲದಾಗುವ ದೆಂಬುದರ ವಿಚಾರ ಯಾರಿಗೂ ಇಲ್ಲ." ಕೂಸು ಗಟ್ಟಿಯಾಗಿ ಅಳುತ್ತಿ ರುವಾಗಲೇ ಅವರು ಮನೆಯಿಂದ ಹೊರಬಿದ್ದರು. ಹಿಂದಿನ ದಿನವೇ ಕೀರ್ತನದಲ್ಲಿ ಕೇಳಿದ್ದ "ನಂಬದಿರು ಈ ದೇಹ ನಿತ್ಯವಲ್ಲ" ಎಂಬುದನ್ನು ಮನಸ್ಸಿನಲ್ಲಿಯೇ ಗುಣಗುಟ್ಟುತ್ತ, ಕುಸುಮೆಯ ರಾಗದ ಪೆಟ್ಟಿಗೆಯ ಸ್ವರವು ದೂರಿನಿಂದಲೇ ಕೇಳಬರುವ, ಮಸುಕಾಗಿ ಕಾಣುತ್ತಿರುವ ಮನೆಯ ಕಡೆಗೆ ತಿರುಗಿ ನೋಡಿದರು. ಮಂದ ದೃಷ್ಟಿಯಿಂದ ಮನೆಯನ್ನು ನೋಡು ತ್ತಿರುವಾಗ ಅವರಿಗನಿಸಿತು. ತಾವು ಒಂದು ತೀರದ ಮೇಲಾದರೆ, ಮನೆ ಯೊಳಗಿನ ಉಳಿದ ಜನರೆಲ್ಲರೂ ಎರಡನೇ ತೀರದ ಮೇಲೆ. ನಡುವೆ ಯಾವದೋ ಒಂದು ನದಿಯ ಕಪ್ಪಗಿನ ನೀರು ಹರಿಯುತ್ತಿದೆ. ತಾವು ಮತ್ತೆ ಆ ನದಿಯನ್ನು ದಾಟಿ ಆಚೆಯ ದಡಕ್ಕೆ ತಿರುಗಿ ಹೋಗುವದೆಂತು? ಎಲ್ಲ ನದಿಗಳ ಮೇಲೂ ಸೇತುವೆಗಳಿರುವದುಂಟು. ಆದರೆ ಆಯುಷ್ಯದ ನದಿಯ ಮೇಲೆ ಪರಮೇಶ್ವರನಿಗೂ ಸೇತುವೆ ಕಟ್ಟಲಿಕ್ಕಾಗುವದಿಲ್ಲ.

ಅಜ್ಜಿಯವರು ಸುಮಾರು ಎಪ್ಪತ್ತು ಮಳೆಗಾಲನ್ನು ಕಳೆದಿದ್ದರು. ಪೂರ ಬಂದಾಗೆಲ್ಲ ಹರಿದು ಬಂದ ಕೊಳಚಿ ಎಲ್ಲವೂ ಒಂದೆಡೆಗೆ ಒಟ್ಟು ಗೂಡುವಂತೆ ಇಡೀ ಆಯುಷ್ಯದಲ್ಲಿಯ ದುಃಖಗಳೆಲ್ಲವೂ ಅವರ ಶೂನ್ಯ ವಾದ ಮನೋಭೂಮಿಯ ಮೇಲೆ ಈಗ ನರ್ತನಮಾಡುತ್ತಿದ್ದವು. ಶರೀ ರವು ಶಕ್ತಿಹೀನವಾಯಿತು. ಮನೆ ಕೆಲಸವೆಲ್ಲವೂ ಬಿಟ್ಟಿತು. ಆದರೆ ಅದ ರೊಡನೆ ಮನವೆಲ್ಲವೂ ಉದಾಸವಾಗಿ ಹೋಯಿತು. ದಿವಸವು ಅದೆಷ್ಟೋ ದೊಡ್ಡದಾಗಿದ್ದಂತೆ ಅನಿಸಹತ್ತಿತು. ರಾತ್ರಿಯಲ್ಲಿ ಒಮ್ಮೆ ನಿದ್ರೆಯಾಗಿ ಎಚ್ಚರಾಯಿತೆಂದರೆ ಮತ್ತೆ ಹತ್ತುತ್ತಿರಲಿಲ್ಲ. ಮತ್ತು ಏನೂ ಮಾಡಿದರೂ ರಾತ್ರಿ ಬೇಗ ಮುಗಿಯುವಂತೆ ಅನಿಸುತ್ತಿರಲಿಲ್ಲ. ತಮ್ಮ ಮಗ, ಸೊಸೆ, ಮೊಮ್ಮಕ್ಕಳು, ಇವರೆಲ್ಲರೂ ತಮ್ಮಿಂದ ಸರ್ವಸ್ವಿಯಾಗಿ ಬೇರೆಯಾಗಿರು ವರೆಂದು ಅವರಿಗೆ ಇತ್ತೀಚೆಗೆ ಅನಿಸತೊಡಗಿತ್ತು. ಅಜ್ಜಿಯವರು ಹಾಸಿಗೆ

ಯಲ್ಲಿ ಕಣ್ಣು ತೆರೆದುಕೊಂಡು ಕತ್ತಲೆಯನ್ನು ನೋಡುತ್ತ ಬಿದ್ದುಕೊಂಡಾಗ್ಗೆ ಉಳಿದವರೆಲ್ಲರೂ ಸುಖಸ್ವಪ್ನಗಳನ್ನು ಕಾಣುತ್ತಿರಬಹುದು. ಊಟ ಉಡಿಗೆ, ಅರಿವೆ-ಅಂಚಡಿ, ಮಾತುಕಥೆ, ಇವೆಲ್ಲವುಗಳ ವಿಷಯದಲ್ಲಿಯೂ ಅವರಿಗೆ ಮನೆಯಲ್ಲಿ ವಿಲಕ್ಷಣ ಬದಲಾವಣೆಯಾಗಿದ್ದಂತೆ ಅನಿಸುತ್ತಿತ್ತು.

ಅವರು ಪುರಾಣಕ್ಕೆ ಹೋಗಿ ಕುಳಿತುಕೊಂಡರು. ಆಚಾರ್ಯರ ಚರ್ಪಟಪಂಜರಿಯು ಸಾಗಹತ್ತಿತು. "ಈ ಜಗತ್ತಿನಲ್ಲಿ ಯಾರದೂ ಯಾರಿಗೂ ಸಂಬಂಧವಿಲ್ಲ. ಆ ಮೂಲಕವೇ ಜನ್ಮದಾರಭ್ಯ ಸರ್ವಕಾಲವೂ ಈಶ್ವರ ಚಿಂತನವನ್ನು ಮಾಡುವದು ಪ್ರತಿಯೊಬ್ಬನ ಕರ್ತವ್ಯವಾಗಿದೆ. ನಾಮ ಮಹಿಮೆಯು ಅಗಾಧವಾಗಿದೆ" ಮನೆಯಲ್ಲಿ ಯಾರಿಗೋ ಸ್ವಲ್ಪ ಬೇನೆಯಾಗಿದ್ದರಿಂದ ಆಚಾರ್ಯರು ಆ ದಿವಸ ಪುರಾಣವನ್ನು ತುಸು ಬೇಗನೆಯೇ ಮುಗಿಸಿದರು.

ಅಜ್ಜಿಯವರು ಭಾವಿಕತೆಯಿಂದ ಎಲ್ಲವನ್ನೂ ಕೇಳಿ ಎದುರಿನ ಗರ್ಭಗುಡಿಯಲ್ಲಿಯ ಶಂಕರನ ಪಿಂಡಿಕೆಯು ಕಾಣದಿದ್ದರೂ, ನಡುವೆಯೇ ಅತ್ತ ಕಡೆಗೆ ಮುಖತಿರುವಿ ನಮಸ್ಕಾರ ಮಾಡಿದರು. ಇನ್ನು ಮೇಲೆ ಈಶ್ವರನು ಭೆಟ್ಟಿಯಾದರೆ ಮಾತ್ರ ಮನದೊಳಗಿನ ತಳಮಳವು ಶಾಂತವಾಗುವದೆಂದು ಅವರಿಗೆ ಅನಿಸಿತು. ಆದರೆ ಈಶ್ವರನು ಭೆಟ್ಟಿಯಾಗುವದು ಸ್ವರ್ಗದಲ್ಲಿ! ಸ್ವರ್ಗವನ್ನು ಸೇರುವದೆಂದರೆ--ಮರಣದ ಕಲ್ಪನೆಯು ಮನಸ್ಸಿನಲ್ಲಿ ಬಂದ ಕೂಡಲೆ ಅವರ ಮೈಮೇಲೆ ನವಿರೆದ್ದವು. ಮಗ ಚಿಕ್ಕವನಿರುವಾಗ್ಗೆ ಬೇನೆಯಿಂದ ಬಳಲುತ್ತಿರುವಾಗ, ಮಗನನ್ನು ಬದುಕಿಸಿ ತನ್ನನ್ನು ಕರೆದುಕೊಂಡು ಹೋಗಬೇಕೆಂದು ಅವರು ದೇವರಿಗೆ ಪ್ರಾರ್ಥಿಸಿಕೊಂಡಿದ್ದರು. ಆದರೆ ಈಗ ಆ ಮಾತಿಗೆ ಎಷ್ಟೋ ವರ್ಷಗಳಾಗಿ ಹೋಗಿದ್ದರೂ ಕೂಡ, ಅವರಿಗೆ ಮರಣದ ಕಲ್ಪನೆಯು ಮೊದಲಿನಕ್ಕಿಂತಲೂ ಹೆಚ್ಚಾಗಿ ದುಃಸಹವಾಗಿ ಅನಿಸತೊಡಗಿತ್ತು. ಅವರ ಮನಸ್ಸು ಹೇಳುತ್ತಿತ್ತು—ನಿನಗೆ ಮರಣ ಬೇಡ. ಬದುಕಿದ್ದಾರೂ ಏನು ಮಾಡತಕ್ಕವಳು ನೀನು? ನಿನ್ನದೇನು ಕೆಲಸವಿದೆ ಈ ಜಗತ್ತಿನಲ್ಲಿ?

ಪುರಾಣ ನಡೆದಿರುವಾಗಲೇ, ಅವರು ಉದಾಸೀನತೆಯಿಂದ ಹೊರಗಡೆಗೆ ನೋಡಿದರು. ಸಂಧ್ಯಾಕಾಲದ ಕೃಷ್ಣಛಾಯೆಗಳು ಇಡೀ ಜಗವನ್ನೇ ಮಸುಕುಮಸಕಾಗಿ ಮಾಡತೊಡಗಿದ್ದವು. ಹಣ್ಣೆಲೆಗಳು ಗಿಡಗಳ ಮೇಲಿಂದ ಕರ್ಣ ಕಟುವಾದ ಸಪ್ಪಳದೊಂದಿಗೆ ಕೆಳಗೆ ಬೀಳುತ್ತಿದ್ದವು. ಗೂಡುಗಳ ಕಡೆಗೆ ತಿರುಗಿ ಹಾರಿ ಹೋಗುತ್ತಿರುವ ಕಾಗೆಗಳ ಕರ್ಕಶ ಸ್ವರವು ಒಂದೇ ಸವನೆ ಕೇಳಬರುತ್ತಿತ್ತು. ಒಂದು ವಿಚಿತ್ರ ಕಲ್ಪನೆಯು ಅಜ್ಜಿಯವರ ಮನಸ್ಸಿನಲ್ಲಿ ಹಾಯ್ದು ಹೋಯಿತು. ಉಳಿದ ಹಕ್ಕಿಪಕ್ಕಿಗಳೆಲ್ಲವೂ ಹೀಗೆ ನಿಧಾನವಾಗಿ ತಮ್ಮ ತಮ್ಮ ಗೂಡುಗಳನ್ನು ಸೇರುವವು. ಆದರೆ ಈ ಕಾಗೆ ಮಾತ್ರ—

ಪುರಾಣವು ಮುಗಿಯುವ ಮೊದಲೇ ಕತ್ತಲೆ ಮುಸಕಿತ್ತು! ಅಜ್ಜಿಯವರು ಸಾವಕಾಶವಾಗಿ ಎದ್ದರು. ಬೀದಿಯಿಂದ ಹೋಗುವಾಗ್ಗೆ ಸ್ಪಷ್ಟವಾಗಿ ಅವರಿಗೆ ಏನೂ ಕಾಣುತ್ತಿರಲಿಲ್ಲ. ಆದರೆ ಮನಸ್ಸಿನಲ್ಲಿಯ ಔದಾಸ್ಯದ ಮೂಲಕ ಆ ಕತ್ತಲೆಯಲ್ಲಿಯೂ ಕೂಡ ಅವರಿಗೆ ಒಂದು ತೆರದ ಸಮಾಧಾನವೆನಿಸುತ್ತಿತ್ತು.

ಬಾಗಿಲಲ್ಲಿಯೇ ಅವರ ಚಿರಂಜೀವ ನಿಂತುಕೊಂಡಿದ್ದ. ಅವನಂದ—"ಎಷ್ಟು ತಡವಾಯಿತು, ಅವ್ವ! ಆದರಲ್ಲಿ ಕತ್ತಲೆಯ ರಾತ್ರಿ ಬೇರೆ—"

ಅಜ್ಜಿಯವರು ಏನೂ ಮಾತಾಡದೆ ಒಳಗೆ ಹೋಗಿ ಬಿಟ್ಟರು. ದೇವರಗುಡಿಯ ಕಡೆಗೆ ಕಂದೀಲು ತೆಗೆದುಕೊಂಡು ಬಂದಿದ್ದರೆ ಈ ಪ್ರೇಮವೇನೋ ನಿಜವೆಂದು ತಮಗೆ ಅನಿಸಬಹುದಾಗಿತ್ತೆಂದು ಅವರ ಮನವು ಹೇಳಹತ್ತಿತು. ಒಳಗೆ ಹೋಗಿ ನೋಡುವಷ್ಟರಲ್ಲಿ ಎಲೆ ಬಡಿಸಿ ಎಲ್ಲವೂ ಸಿದ್ಧವಾಗಿತ್ತು. ಕುಸುಮೆಯೂ ರಾಮನೂ ಸಿನೇಮಾಕ್ಕೆ ಹೋಗುವ ಆನಂದಾತಿರೇಕದಲ್ಲಿದ್ದರು. ಮಕ್ಕಳೆಲ್ಲವೂ ತಮಗೂ "ಸಿನೇಮಾಕ್ಕೆ ನಡೆಯಿರಿ" ಅನ್ನಬೇಕೆಂದು ಅವರ ಆಶೆ. ಅಲ್ಲಿಂದ ತಾವು "ನನಗೇನೂ ಚನ್ನಾಗಿ ಕಾಣುವದಿಲ್ಲ. ಸುಮ್ಮನೆ ಯಾತಕ್ಕೆ ರೊಕ್ಕ ಹಾಳು? ನಾನು ಸುಮ್ಮನೇ

ಮನೆಯಲ್ಲಿದ್ದುಕೊಂಡು ಕೂಸು ಎತ್ತಿಕೊಂಡಿರುವೆ. ನೀವೆಲ್ಲರೂ ನೋಡಿ ದರೆ ಆಗಿಹೋಯಿತು!'' ಎಂದು ಅನ್ನಬೇಕೆಂದು ಭಾವಿಸಿಕೊಂಡಿದ್ದರು.

ಆದರೆ ಅದೇ ಕಾರ್ಯಕ್ರಮವನ್ನು ಸೊಸೆಯು ಹೇಳಿಕೊಟ್ಟ ಕೂಡಲೆ ಅತ್ತೆಯವರಿಗೆ ವಿಲಕ್ಷಣವಾಗಿ ಸಿಟ್ಟು ಬಂದಿತು! ಸಣ್ಣ ಕೂಸನ್ನು ಮನೆಯಲ್ಲಿ ಬಿಟ್ಟು ಸಿನೇಮಾಕ್ಕೆ ಹೊರಟಿರುವ ಸೊಸೆಯ ಒಳ್ಳೇ ಸಮಾ ಚಾರವನ್ನು ತೆಗೆದುಕೊಳ್ಳಬೇಕೆಂದೆನಿಸಿತು ಕ್ಷಣಮಾತ್ರ ಅವರಿಗೆ. ಆದರೆ ಸಂಜೆಯ ಮುಂದಿನ ಆ ವಿಚಿತ್ರ ಕಲ್ಪನೆಯು ಅವರಿಗೆ ಒಮ್ಮಲೆ ನೆನಪಾ ಯಿತು. ತಾವಿರುವದು ನದಿಯ ಆಚೆಯ ದಡದಲ್ಲಿ. ಇವರೆಲ್ಲರೂ ಇತ್ತ ಕಡೆಯ ದಂಡೆಯ ಮೇಲೆ! ಇನ್ನು ಮೇಲೆ ಇವರದೂ ತಮ್ಮದೂ ಏನು ಸಂಬಂಧ? ಏನಾದರೂ ಮಾಡಿಕೊಳ್ಳಲೊಲ್ಲರೇಕೆ!

ಅವರು ದೇವರ ಮನೆಯಲ್ಲಿ ಹೋಗಿ ಕುಳಿತುಕೊಂಡರು. ನಂದಾ ದೀಪಕ್ಕೆ ಕುಡಿಯು ಬಂದು ದೀಪವು ಶಾಂತವಾಗಿ ಉರಿಯುತ್ತಿರದಿದ್ದರೂ ಅದನ್ನೇನು ಮುಗುಚದೆ ಹಾಗೆಯೇ ಸ್ತಬ್ಧವಾಗಿ ಎಷ್ಟೋ ವೇಳೆ ಕುಳಿ ತರು. ಕಡೆಗೆ ಅವರು ದೇವರ ಮುಂದೆ ತಲೆಬಾಗಿಸಿ ಸಗದ್ಗದವಾಗಿ "ನಾರಾಯಣಾ, ಬಿಡಿಸಬಾರದೇ ಒಮ್ಮೆ ಇದರೊಳಗಿಂದ!" ಎಂದು ಬೇಡಿ ಕೊಂಡರು. ಅವರ ಮುಖದೊಳಗಿಂದ ಈ ಶಬ್ದಗಳು ಹೊರಬಿದ್ದವೇ ನೋ ನಿಜ. ಆದರೆ ಜೀವನ ಜಂಜಾಟದೊಳಗಿಂದ ಮುಕ್ತವಾಗಬೇಕಾ ದರೆ ಮರಣದ ಹೊರ್ತಾಗಿ ಎರಡನೇ ಮಾರ್ಗವಿಲ್ಲವೆಂದು ಅವರ ಲಕ್ಷ್ಯ ದಲ್ಲಿ ಬಂದ ಕೂಡಲೇ ಅವರಿಗೆ ಹೇಗೋ ಅನಿಸಿತು. ಆದರೆ ತಿರುಗಿ ಎರಡನೇ ದಂಡೆಗೆ ಹೋಗುವದು ಹೇಗೆ? ನಡುವಿನ ನೀರು ಎಷ್ಟು ಆಳ ವಾಗಿರಬಹುದು!

ಫಲಾಹಾರದ ಸಲುವಾಗಿ ಅವರು ದೇವರ ಮನೆಯನ್ನು ಬಿಟ್ಟು ಹೊರಗೆ ಬಂದಕೂಡಲೆ, ಅವರಿಗೆ ತಮ್ಮ ಮನೆಯಲ್ಲಿಯ ಎರಡನೇ ಜಗತ್ತಿನ ಅರಿವು ಮತ್ತಿಷ್ಟು ಸ್ಪಷ್ಟವಾಯಿತು. ಈಗ ಎಷ್ಟೋ ವರ್ಷ ಗಳಲ್ಲಿ ಬಿಳಿಯ ಪತ್ತಲದ ಹೊರತಾಗಿ ಎರಡನೇ ಯಾವ ವಸ್ತ್ರದ ಸ್ಪರ್ಶ

ವೂ ಅವರಿಗೆ ಆಗಿರಲಿಲ್ಲ. ಸಿನೇಮಾಕ್ಕೆ ಹೋಗಲಿಕ್ಕೆ ಸಿದ್ಧಳಾದ ಕುಸು ಮೆಯನ್ನು ಅವರು ನೋಡಿದರು. ಛೀ! ಹೊಸ ಗುಲಾಬಿ ಪತ್ತಲ, ಅದೇ ಬಣ್ಣದ ಬ್ಲೌಜ, ಹೆಳಲಿನ ಚಕ್ರ, ಎಡಗೈಯಲ್ಲಿ ಕಟ್ಟಿದ ಗಡಿಯಾರ— ಇಷ್ಟಾದರೂ ಒಳ್ಳೆಯದು. ಮುಖಕ್ಕೆ ಹಚ್ಚಿಕೊಂಡ ಪಾವಡರು ಅವರಿಗೆ ಕಾಣಿಸುವದು ಶಕ್ಯವಿರಲಿಲ್ಲ. ಆದರೂ ನೀರು ಕುಡಿಯಲಿಕ್ಕೆಂದು ಕುಸು ಮೆಯು ಅವರ ಹತ್ತರ ಹಾಯ್ದು ಹೋದ ಕೂಡಲೆ, ಯಾವದೋ ಒಂದು ಅತ್ತರಿನ ಸುವಾಸವು ಅವರಿಗೆ ಬಂದು ತಲುಪಿದಾಗ ಅವರೇನೂ ಮೂಗು ಮುರಿಯದೆ ಇರಲಿಲ್ಲ.

ಸ್ವಲ್ಪಕಾಲದಲ್ಲಿ ಕುಸುಮೆಯ ತಾಯಿಯ ಸಿದ್ಧತೆಯೂ ಆಯಿತು. ಮೂರುಮಕ್ಕಳತಾಯಿಯಾಗಿ ಕನ್ನಡಿಯನ್ನು ಮುಂದಿಟ್ಟುಕೊಂಡು ಕೇಶ ರಚನೆಯನ್ನು ಮಾಡಿಕೊಳ್ಳುತ್ತಿರುವದನ್ನು ಕಂಡು ಅಜ್ಜಿಯವರಿಗೆ ವಿಚಿತ್ರ ವೆನಿಸಿತು. ಇಂಥ ಜಗತ್ತಿನಿಂದ ತಾವೂ ದೂರದೂರಾಗಿ ಹೋಗುತ್ತಿರುವದು ಒಂದು ದೃಷ್ಟಿಯಿಂದ ಒಳ್ಳೇಯದೇ ಎಂದು ಕ್ಷಣಮಾತ್ರ ಅವರಿಗನಿಸಿತು ಆದರೆ ಆ ವಿಚಾರವು ಕೂಸನ್ನು ತೊಟ್ಟಿಲಲ್ಲಿ ಮಲಗಿಸಿ ಎಲ್ಲರೂ ಮನೆಯ ಹೊರೆಗೆ ಬೀಳುವವರೆಗೆ ಮಾತ್ರ ಉಳಿಯಿತು ಅವರು ಕೆಲವು ಕಾಲ ದೇವರ ಮನೆಯಲ್ಲಿ ಕುಳಿತುಕೊಂಡರೂ, ಮನೆಯಲ್ಲಿಯ ಭಯಾನಕವಾದ ಶಾಂತತೆಯಿಂದ ಅವರ ಮನಸ್ಸಿನಲ್ಲಿ ಅತಿಶಯವಾಗಿ ಅಸ್ವಸ್ಥತೆಯಾಯಿತು. ಅವರಿಗೆ ಒಂದು ಕ್ಷಣ ಅನಿಸಿತು— ಈ ಜಗವನ್ನು ತಾವು ಎಂದಿಗೋ ಬಿಟ್ಟು ಹೋದವರು. ಯಾತರ ಮೇಲಾದರೂ ಆಶೆ ಉಳಿದಿದ್ದರ ಮೂಲಕ ತಮಗೆ ಈಗ ಭೂತಯೋನಿಯಲ್ಲಿರಬೇಕಾದದ್ದು. ಆ ಮೇಲೆ ಆ ಕ್ಷಣದಲ್ಲಿ ದೇವರ ಮುಂದೆ ಕುಳಿತವರು ಸ್ವತಃ ತಾವೇ ಆಗಿರದೆ, ತಮ್ಮ ಭೂತವೇ ಆಗಿದ್ದರೆ?

ಈ ವಿಚಿತ್ರ ವಿಚಾದಿಂದ ಅವರ ಹೃದಯವು ನಡುಗಿತು. ದೇವರ ಮನೆಯೊಳಗಿಂದ ಹೊರಗೆ ಬಂದು, ಇಲ್ಲಿ ಅಲ್ಲಿ ದೀಪ ಹಚ್ಚುತ್ತ, ಸುಮ್ಮ ಸುಮ್ಮನೆ ಮನೆ ತುಂಬ ತಿರುಗಾಡಹತ್ತಿದರು. ಅತ್ತಿತ್ತ ನೋಡುವಷ್ಟ ರಲ್ಲಿ ಅಡಿಗೆಯ ಮನೆಯ ಒಂದು ಮೂಲೆಯಲ್ಲಿ ನಾಲ್ಕೈದು ಕಬ್ಬಿನ

ತುಣುಕುಗಳನ್ನು ನೋಡಿ, ಅವುಗಳನ್ನು ಸುಲಿದುಕೊಂಡು ತಿನ್ನಬೇಕೆಂದೆನಿಸಿತು. ಆದರೆ ಮರುಕ್ಷಣವೇ ಅವರಿಗೆ ಎಚ್ಚರಬಂದಂತಾಗಿ, ಬಾಯಿಯಲ್ಲಿ ಒಂದು ಕೂಡ ಹಲ್ಲಿಲ್ಲದಾಗ ತಾನು ಕಬ್ಬು ತಿನ್ನುವದಾದರೂ ಹೇಗೆ? ತಿನ್ನುವದೆಂಬ ಪ್ರಶ್ನೆಯು ಅವರಿಗೆ ಮನದಲ್ಲಿಯೇ ಎಷ್ಟೋ ಅಪಮಾನವನುಂಟುಮಾಡಿತು. ಸೊಸೆಯ ಕೋಣೆಯಲ್ಲಿ ಹೋದ ಮೇಲಂತೂ ಅವರ ಮನಸ್ಸಿನ ಅಸ್ವಾಸ್ಥ್ಯವು ಹೆಚ್ಚಾಯಿತು ಅಲ್ಲಿಯ ಪಲ್ಲಂಗದ ಮೇಲಿನ ಸೊಳ್ಳೆತೆರೆ, ಮೇಜಿನ ಮೇಲಿನ ಒಳ್ಳೆ ಬೆಲೆಬಾಳುವ ಫೋನೋ, ಗೋಡೆಯ ಮೇಲಿನ ತರತರದ ಸುಂದರ ಚಿತ್ರಗಳು,—ಎತ್ತನೋಡಿದತ್ತ ಅವರ ಕಣ್ಣುಗಳಿಗೆ ಮುಂದುಗಾರಿಕೆಯೇ ಕಂಡು ಬಂದಿತು. ನಡುವೆಯೇ ನೆಲದ ಮೇಲೆ ಬಿದ್ದಿದ್ದ ರೇಶಿಮೆಯ ಕರವಸ್ತ್ರವನ್ನು ನೋಡಿದಾಗಂತೂ, ಅದನ್ನು ತೆಗೆದುಕೊಂಡು ಚರ ಚರನೆ ಹರಿದು ಬಿಡಬೇಕೆನ್ನುವಷ್ಟು ಸಿಟ್ಟು ಬಂದಿತು. ಹುಡುಗರ ಕೋಣೆಯಲ್ಲಿ ಹೋದ ಮೇಲಂತೂ ಅವರ ಕೋಪಾಗ್ನಿಯಲ್ಲಿ ಮತ್ತಿಷ್ಟು ಎಣ್ಣೆ ಬಿದ್ದಂತಾಯಿತು. ಕುಸುಮೆಯ ಮೇಜಿನ ಮೇಲಂತೂ ಕೇಶ ರಚನೆಯ ಸಾಮುಗ್ರಿಗಳ ಸಮ್ಮೇಲನವೇ ಕೂಡಿತ್ತು ಸಮೀಪದಲ್ಲಿಯೇ ಬಿದ್ದುಕೊಂಡಿದ್ದ ಒಂದು ಪುಸ್ತಕವನ್ನು ನೋಡಿ ಅಜ್ಜಿಯವರು ಪಿಟಪಿಟನೆ ಅಂದುಕೊಂಡರು ಏನೂ ಅರ್ಥವಿಲ್ಲ ಈಗಿನ ಈ ಹೆಣ್ಣು ಹುಡಿಗೆಯರೆಲ್ಲ ಏನು ಬೇಕಾದದ್ದನ್ನು ಓದುವರು!" ಅದೊಂದು ಕಾದಂಬರಿ ಇತ್ತು. ಸಾಲದ್ದಕ್ಕೆ ಅದರ ಮುಖಪೃಷ್ಠದ ಮೇಲೆ ನಾಯಿಕೆಯನ್ನು ಚುಂಬಿಸುತ್ತಿರುವ ನಾಯಕನ ಚಿತ್ರವೊಂದಿತ್ತು! ಗೂಟದ ಮೇಲೆ ತೂಗಾಡುವ ರಾಮನ 'ಸಾಹೇಬನ ಟೊಪ್ಪಿಗೆ'ಯನ್ನು ಅವರು ನೋಡಿಯೂ ನೋಡನಂತೆ, ಸಮೀಪದಲ್ಲಿ ಬಿದ್ದುಕೊಂಡಿದ್ದ ಪಾಟಿಯ ಮೇಲಿನ ಪುಸ್ತಕವನ್ನೆತ್ತಿ ತೆರೆದು ನೋಡಿದರು ಕಷ್ಟದಿಂದ ಅವರಿಗೆ ಇಷ್ಟೇ ಓದಲು ಸಾಧ್ಯವಾಯಿತು.—

**ಅಜ್ಜನ ಬೆಳ್ಳನ ಚಂಡಿಕೆ ಗಾಳಿಗೆ**
**ಬುರು ಬುರು ಬುರು ಬುರು ಹಾರುವದು**
**ನಮಗೆಲ್ಲಾ ನಗೆ ಬೀರುವದು.**

ಬೇಜಾರಿನಿಂದ ಆ ಪುಸ್ತಕವನ್ನು ಅಲ್ಲಿಯೇ ಬೀಸಾಟಿ, ಅವರು ಪಡಸಾಲೆಗೆ ಬಂದರು. ಅಲ್ಲಿಯೂ ಗಾಢವಾಗಿ ಕತ್ತಲೆಯು ಹಬ್ಬಿಕೊಂಡಿತ್ತು. ಅಂಗಣದಲ್ಲಿ ಒಂದು ಹಳೆಯ ಹಂದರದ ಮೇಲೆ ಬೆಳೆದ ಮಲ್ಲಿಗೆಯ ಬಳ್ಳಿಯು ಎಲ್ಲ ಕಡೆಯಲ್ಲಿಯೂ ಸುವಾಸವನ್ನು ಬೀರುತ್ತಿತ್ತು. ಆದರೆ ಅಜ್ಜಿಯವರಿಗೆ ಅದರ ಅರಿವೂ ಇರಲಿಲ್ಲ.

ಅವರು ಮತ್ತೆ ದೇವರಮನೆಯಲ್ಲಿ ಹೋಗಿ, ಅಲ್ಲಿಯೇ ನೆಲದ ಮೇಲೆ ಅಡ್ಡಾದರು. ಮನವೆಲ್ಲವೂ ಕುರುಡತನದಿಂದ ಧಡಪಡಿಸುತ್ತಿತ್ತು. ತಾವು ಬದುಕಿರುವದಾದರೂ ಯಾತರ ಸಲುವಾಗಿ ಎಂಬುದು ಅವರಿಗೆ ತಿಳಿಯದಾಗಿ ಹೋಯಿತು. ಮಲಗಿಕೊಂಡು ಕಣ್ಣುಮುಚ್ಚಿದಕೂಡಲೆ, ಅವರ ಕಣ್ಣುಗಳ ಮುಂದೆ ಇಡೀ ಆಯುಷ್ಯವು ಒಂದು ಪಾತರಗಿತ್ತಿಯಂತೆ ಹಾಯ್ದುಹೋಯಿತು. ತಾವು ಇಷ್ಟು ದಿವಸ ಬದುಕಿರುವದು ಯಾರ ಸಲುವಾಗಿ? ಇನ್ನುಮುಂದೆ ಬದುಕಿರುವದು ಯಾಕೆ? ಮತ್ತು ಯಾರ ಸಲುವಾಗಿ? ಹೀಗೆ ಅನೇಕ ವಿಚಾರಗಳಿಂದ ಅವರ ಮನಸ್ಸು ತಲ್ಲಣಗೊಂಡು, ಅವರು ಅಲ್ಲಿಯೇ ನಿದ್ರೆಹೋದರು.

ಆದರೆ ಸ್ವಲ್ಪ ವೇಳೆಯಲ್ಲಿಯೇ ಯಾರೋ ಬಾಗಿಲ ಬಾರಿಸಿದರು. ನಿದ್ರೆ ಮುರಿದದ್ದರಿಂದ ತುಸು ಸಿಟ್ಟಿನಲ್ಲಿಯೇ ಅಜ್ಜಿಯವರು ಕಣ್ಣು ತೆರೆದರು ನಂದಾದೀಪವು ಶಾಂತವಾಗಿ ಹೋಗಿತ್ತು. ಹಾಗೆಯೇ ಕತ್ತಲೆಯಲ್ಲಿ ಧಡಪಡಿಸುತ್ತ ಬಾಗಿಲ ಕಡೆಗೆ ಬಂದರು. ಮನೆಯವರೆಲ್ಲರೂ ಸಿನೇಮಾದಿಂದ ತಿರುಗಿ ಬಂದಿದ್ದರು.

"ಕೂಸು ಎಚ್ಚರಾಗಿತ್ತೇನು?" ಸೊಸೆ ಪ್ರಶ್ನೆಮಾಡಿದಳು. ಅತ್ತೆಯವರು ಏನೂ ಉತ್ತರಕೊಡಲಿಲ್ಲ. ತೊಟ್ಟಿಲಲ್ಲಿ ಕೈಯಾಡಿಸುತ್ತಲೇ ಸೊಸೆಯು ಉದ್ಗಾರತೆಗೆದಳು "ಅವ್ವಯ್ಯ ತೊಯ್ದು ತಪ್ಪಂಡಿಯಾಗಿದೆಯಲ್ಲ ಹಾಸಿದ್ದು! ಇದರಲ್ಲಿಯೇ ಬಿದ್ದುಕೊಂಡಿದೆಯಲ್ಲ ಮಗು" ಎನ್ನುತ್ತ ಅವಳು ಕೂಸು ತೆಗೆದುಕೊಂಡು ಹೋದಳು. ಇದನ್ನು ನೋಡಿ ಮಾತ್ರ ಅಜ್ಜಿಯವರಿಗೆ— ತಾವು ಆಗಲೇ ಮನೆಯಲ್ಲಿ ಯಾರೂ ಇಲ್ಲದಮೂಲಕ

ವೇಳೆಸಾಗದೆ ಮನೆತುಂಬ ಅಡ್ಡಾಡಿದ್ದರೂ ಕೂಸು ಮಲಗಿದ್ದ ಕಡೆಗೆ ಮಾತ್ರ ತಾವು ಬಂದಿರಲಿಲ್ಲವೆಂಬುದು ನೆನಪಾಯಿತು. ಮನೆಯಲ್ಲಿಯ ಉಳಿದ ಎಲ್ಲ ಜನರ ಜಗವೆಲ್ಲವೂ ತಮ್ಮಿಂದ ಬೇರೆಯಾಗಿದ್ದರೂ ಆ ಮುದ್ದು ಕೂಸಿನ ಜಗವೇನು ತಮ್ಮಿಂದ ಬೇರೆಯಾಗಿದೆಯೆ? ಎಂದೆನಿಸಿ, ಅವರು ಮಗುವನ್ನು ಕರೆದುಕೊಳ್ಳಬೇಕೆಂದು ಮುಂದಕ್ಕೆ ಬರುವಷ್ಟರಲ್ಲಿ ಸೊಸೆಯು ತನ್ನ ಕೋಣೆಯನ್ನು ಸೇರಿಬಿಟ್ಟಿದ್ದಳು

ಕತ್ತಲೆಯಾಗಿದ್ದ ದೇವರಮನೆಯಲ್ಲಿ ಅಜ್ಜಿಯವರು ಕಣ್ಣೊರಿಸಿಕೊಂಡರು. ಆ ಮುದ್ದು ಮಗುವಿನ ವಿಶ್ವದಲ್ಲಿ ತಾವು ಇನ್ನೂ ರಮಿಸಬಹುದು. ಆದರೆ ಅವರ ಮೇಲೆ ತಮ್ಮದೇನು ಹಕ್ಕು? ತಾಯಿಯ ಮಗ್ಗುಲಿನಲ್ಲಿ ಮಗುವು ಈಗಲೇ ನಕ್ಕು ನಲೆಯುತ್ತ ಮಲಗಿರಬೇಕು. ಆದರೆ ತಾವು–– ಬೆಳಗಾಗುವವರೆಗೂ ಕಣ್ಣಿಗೆ ಕಣ್ಣು ಹತ್ತುವದೂ ಶಕ್ಯವಿಲ್ಲ. ಒಂಟಿಗತನ–– ಎಂದಿಗೂ ಇಲ್ಲವಾಗಲಾರದ ಒಂಟಿಗತನ –– ಇನ್ನು ಮುಂದೆ ತಮ್ಮ ಆಯುಷ್ಯದಲ್ಲಿ ಸಿಗಬೇಕಾದ ಆನಂದವಾದರೂ ಯಾವದು? ನಂದಾದೀಪವನ್ನು ಹಚ್ಚಬೇಕೆಂದು ಎಷ್ಟೋ ಸಾರೆ ವಿಚಾರ ಮನಸ್ಸಿನಲ್ಲಿ ಬಂದರೂ ಕುಳಿತಲ್ಲಿಂದ ಏಳುವ ಮನಸ್ಸಾಗಲೊಲ್ಲದು. ಕೂಡ್ರಲೊಲ್ಲನೇಕೆ ದೇವರು ಹಾಗೆಯೆ ಕತ್ತಲೆಯಲ್ಲಿ "ಎಂಬ ಅವರ ಶ್ರದ್ಧೆಗೆ ವಿಸಂಗತವಾದ ವಿಚಾರಗಳಾದರೂ ಕ್ಷಣಮಾತ್ರ ಅವರ ಮನಸ್ಸಿನಲ್ಲಿ ಬಂದು ಹೋದವು. ಇಷ್ಟರಲ್ಲಿ ಕೂಸು ಬಹಳವಾಗಿ ಅಳುತ್ತಿರುವದು ಕೇಳಬಂದಿತು. ಅಜ್ಜಿಯವರನೂ ಕೂತವರು ಮಿಸುಕಲಿಲ್ಲ. "ದೇವರ ಮನೆಯಲ್ಲಿ ಇರಬಹುದು ಅವರು" ಎಂದೆನ್ನುವ ಸೊಸೆಯ ಮಾತು ಕೇಳಿದ ಕೂಡಲೇ, ಅವರು ಎದ್ದು ಲಗುಬಗೆಯಿಂದ ದೇವರ ಮುಂದಿನ ದೀಪಹಚ್ಚಿದರು. ಕೂಸನ್ನು ತೆಗೆದುಕೊಂಡು ಒಳಗೆ ಬಂದಕೂಡಲೆ, ಮಗುವು ಅಜ್ಜಿಯ ಕಡೆಗೆ ಧಾವಿಸುವಂತೆ ಕೈಮುಂದಕ್ಕೆ ಮಾಡಿ ಹೋಗಲೆಳಿಸಿತು. ಸೊಸೆಯು ಹೇಳಿದಳು. "ಎಚ್ಚರಾದ ಕೂಡಲೆ" "ಅ....ಜ್ಜೀ....ಅ....ಜ್ಜೀ ಅನ್ನಲಿಕ್ಕೆ ಸುರು ಮಾಡಿದ್ದು ಏನು ಮಾಡಿದರೂ ಸುಮ್ಮನಾಗಲೊಲ್ಲದು. ಎಷ್ಟು ಚಪ್ಪ

ರಿಸಿದೆ....ಆಡಿಸಿದೆ. ಒಂದೇಸವನೆ "ಅ....ಜ್ಜೀ....ಅಜ್ಜೀ" ನಡೆದುಬಿಟ್ಟೆದೆ. "ನಿಮಗೆ ಸುಮ್ಮನೆ ತ್ರಾಸಾಗಬಾರದೆಂದು—"

"ಕೂಸಿನದೆಂಥ ತ್ರಾಸು? ಹಾಗೇನೂ ಮಾತಾಡಬಾರದು ತಾಯಿ?" ಅಜ್ಜಿಯವರು ನಸುನಗುತ್ತ ಹೇಳಿದರು

ಕೂಸಿನ ತಾಯಿಯು ಹೋಗಿ ಮಲಗಿಕೊಂಡನಂತರ ಅಜ್ಜಿಯವರು ಮಗುವನ್ನು ಆಡಿಸುವದಕ್ಕಾಗಿ ಹೊರಗೆ ಪಡಸಾಲೆಯಲ್ಲಿ ಬಂದು ಆಕಾಶದಲ್ಲಿಯ ಚಿಕ್ಕೆಗಳನ್ನು ತೋರಿಸಹತ್ತಿದರು. ಈಗ ಮಾತ್ರ ಅವರಿಗೆ ಕಲ್ಪನೆಯಾಯಿತು. ಮೊದಲಿನಂತೆ ಕತ್ತಲೆಯು ಗಾಢವಾಗಿ ಹಬ್ಬಿತ್ತು ಆದರೆ ಮೇಲೆ ತಾರೆಗಳು ಚಕಚಕನೆ ಹೊಳೆಯುತ್ತಿದ್ದವು. ಗಾಳಿಯ ಲಹರಿಯುಗುಂಟ ಮಲ್ಲಿಗೆಯಸುವಾಸವಾದರೂ ಬಂದಿತು. ಆ ಮಲ್ಲಿಗೆಯ ಮಧುರಸುವಾಸಕ್ಕಾಗಿಯೇ ಆ ಬಿದಿರುಹಂದರಕ್ಕೆ ಹಾಗೆ ಒಂವೇ ಸ್ಥಳದಲ್ಲಿ ಹುದುಗಿಕೊಂಡು ನಿಲ್ಲಬೇಕಾಗಿದೆ ಎಂಬ ವಿಚಾರ ಬಂದಕೂಡಲೆ ಅಜ್ಜಿಯವರ ಮನಸ್ಸಿನಲ್ಲಿ ಎಷ್ಟೋ ಶಾಂತತೆಯುಂಟಾಯಿತು.

ಅವರ ಪ್ರಸನ್ನವಾದ ಮನಸ್ಸು ಕೇಳುತ್ತಿತ್ತು. "ಅದೇ ದೇವರ ಮನೆಯಿಂದ ಬಂದಿರುವ ಮತ್ತು ಈಗಲೇ ದೇವರ ಮನೆಗೆ ಹೋಗುವವರ ನಡುವೆ ನಿಕಟಪ್ರೇಮ ಉಂಟಾಗಲಿಕ್ಕೆ ಏನು ಅಡ್ಡಿ?"

ತಾಯಿಯು ಹೇಳಿದಂತೆ ಕೂಸನ್ನು ಕರೆದುಕೊಂಡು ಹೋಗಲಿಕ್ಕೆ ಬಂದ ಕುಸುಮೆಯು ಗುಣಗುಟ್ಟುತ್ತಿದ್ದಳು—

**ಅಂದು ಗೋಪಾಲನೆದ್ದು**
**ಕಂಡನು ಪುಷ್ಪರಾಶಿ**
**ಎದುರದಡದಿ ನಿಂದು**
**ಬಿದಿರಕೊಳಲ ತನ್ನ**
**ಅಧರದಿ ನುಡಿಸುವ**
**ಚದುರ ರಂಗನ ಕಂಡೆ**

ಆ ಗುಣುಗುಣು ಗಾನವನ್ನು ಕೇಳಿ ಕೂಸಿನಂತೆ ಅಜ್ಜಿಯವರಿಗಾದರೂ ವಿಲ್ಲಕ್ಷಣವಾದ ಆನಂದವಾಯಿತು.

# ಕುರುಡನ ಭಾವಬಿದಿಗೆ.



"ಚಂದ್ರಶೇಖರಾ, ನಿದ್ರೆ ಬಾರದಿದ್ದರೆ ಸುಮ್ಮನೆ ಮಲಗಿಕೊಳ್ಳ ಬಾರದೆ?"

"ಇಂಥ ಬಕಧ್ಯಾನ ನನಗೇನೂ ಸೇರುವದಿಲ್ಲ ನೋಡು, ಕಕ್ಕೀ! ನಿದ್ರೆ ಬಾರದೆ ಸುಮ್ಮನೆ ಕಣ್ಣುಮುಚ್ಚಿಕೊಂಡು ಹಾಸಿಗೆಯಲ್ಲಿ ಬಿದ್ದು ಕೊಳ್ಳುವದೆಂದರೆ, ಮನುಷ್ಯನನ್ನು ಜೀವಹೋಗದೆಯೇ ಚಿತೆಯ ಮೇಲೆ ಒಯ್ದು ಇರಿಸಿದಂತೆಯೆ!

"ಏನು ಅಮಂಗಲ ಮಾತೋ ನಿನ್ನವು!" ಕಕ್ಕಿಯವರು ಗಾಬರಿ ಯಾಗಿ ನುಡಿದರು. "ಚಂದ್ರ, ನಿನಗೇನೂ ವೇಳೆ ಹೊತ್ತು ಯಾವದೂ ತಿಳಿಯುವದಿಲ್ಲವೇನೋ?"

ಬದಿಯ ಕೋಣೆಯಲ್ಲಿ ಮಲಗಿಕೊಂಡ ಜಾನ್ಹವಿಯು ಎಚ್ಚರಾ ಗಿಯೇ ಇದ್ದಳು. ಅವಳು ಚಂದ್ರಶೇಖರನ ಹತ್ತರ ಬಂದು ಅವನ ಬಾಯ ಮೇಲೆ ಕೈ ಇಡುತ್ತ ಅಂದಳು. "ನಿನ್ನ ಬಾಯಿಗೆ ಇನ್ನುಮೇಲೆ ಕೀಲಯನ್ನೇ ಹಾಕಲಿಕ್ಕೆಬೇಕು"

"ಅಣ್ಣನನ್ನು ಉಪವಾಸದಿಂದ ಜೀವಹೊಡೆಯುವ ಯುಕ್ತಿ ಒಳ್ಳೆಯ ದಾಗಿದೆ, ಇದು ನಿನ್ನಿದು!"

"ಹಾಗಾದರೆ ಮರಣದ ಅಭದ್ರವಾದ ಮಾತುಗಳನ್ನೇಕೆ ತೆಗೆಯುವಿ ನೀನು?"

"ಜೀವನದಲ್ಲಿ ಮರಣದ ಉಪ್ಪು ಇರದಿದ್ದರೆ ಎಲ್ಲವೂ ಅತಿ ಸಪ್ಪಗೆ ಆಗಿ ಹೋಗುತ್ತಿತ್ತು!"

"ಈ ನಿನ್ನ ಸುಭಾಷಿತಗಳನೆಲ್ಲ, ನಿನ್ನ ತತ್ವಜ್ಞಾನವನ್ನೆಲ್ಲ ನಿನ್ನ ಕಥೆ ನಾಟಕಗಳ ಸಲುವಾಗಿ ಕಾಯ್ದು ಇಟ್ಟರೆ ಒಳ್ಳೆಯದು. ಅವ್ವ ನೇನೂ ನಿನ್ನ ಕಥೆ ನಾಟಕಗಳನ್ನು ಓದಲಿಕ್ಕೆ ಹೋಗುವದಿಲ್ಲ."

"ಆದರೆ ನೀವು ಇರುವಿರಲ್ಲ ಬಾಯೀ ಸಾಹೇಬರು. ಕಾಲೇಜಿನಲ್ಲಿ ಏನೇನೋ ಓದಿ, ಮರಣದ ಹೆಸರು ಕೇಳಿದ ಕೂಡಲೆ, ಮುಳು ಮುಳು ಅಳುವಿರಿ. ನಿದ್ರೆಯಾದರೂ ಒಂದು ಪ್ರಕಾರದ ಮೃತ್ಯುವೇ ಎಂದು ಹೇಳುವರು ಕವಿಗಳು. ಬಾಯಿಯವರ ಕರ್ಣಪಥದ ಮೇಲೆ ಎಂದಾದರೂ ಹಾಯ್ದು ಹೋಗಿದೆ ಏನು ಅಂಥದೊಂದು ಕವಿಯ ವಾಕ್ಯ?"

"ಕವಿಗಳೆಂದರೆ ನೀವು ಹೀಗೆಯೇ ಹುಚ್ಚರೆನ್ನುವದೇನೂ ಸುಳ್ಳಲ್ಲ. ಕಕ್ಕಿಯು ಸಹಜವಾಗಿ ಮಲಗಿಕೊಳ್ಳಲಿಕ್ಕೆ ಹೇಳಿದ್ದಳು ಮತ್ತು ನೀನು ಅಷ್ಟರ ಮೇಲಿಂದ ಅಮಂಗಲ ಕಲ್ಪನೆಗಳನ್ನು--"

ಕಕ್ಕಿಯವರು (ಅವರು ತಾಯಿಯನ್ನು ಕಕ್ಕಿ ಎಂದು ಸಂಬೋಧಿಸುತ್ತಿದ್ದರು) ಇಷ್ಟು ವೇಳೆ ಅಣ್ಣ ತಂಗಿಯರ ವಾಗ್ಯುದ್ಧವನ್ನು ಕೇಳುತ್ತ ಸ್ತಬ್ಧವಾಗಿ ನಿಂತವರು ಅಂದರು "ಚಂದ್ರಶೇಖರ, ಓದಿ ಓದಿ ನಿನ್ನ ಕಣ್ಣುಗಳು ಎಷ್ಟು ಅದುವಾಗಿರುವವು. ಇನ್ನಾದರೂ ವಿಚಾರಿಸು. ಅದರಲ್ಲಿ ನಿನಗೆ ಕಣ್ಣು ಬೇನೆಯಾಗಿ ಇನ್ನೂ ಒಂದು ತಿಂಗಳು ಕೂಡ ಕಳೆದಿಲ್ಲ."

"ಕಣ್ಣು ಬೇನೆಯಾದಾಗ, ಆ ಬೇನೆಯ ಅಂಜಿಕೆ. ಇನ್ನು ಮೇಲೆ ಬಹಳ ಓದಿ ಅವುಗಳನ್ನು ಪೂರ್ಣವಾಗಿ ಕಳೆದುಕೊಳ್ಳುವ ಅಂಜಿಕೆ! ಅಂತೂ ಒಟ್ಟಿನಲ್ಲಿ ಏನು? ಹೆಜ್ಜೆಹೆಜ್ಜೆಗೂ ನಿನಗೆ ಅಂಜಿಕೆಯೇ ಅಂಜಿಕೆ ನೋಡು ಕಕ್ಕಿ!"

"ಚಂದ್ರ ನಿನಗೆ ಸ್ವತಃ ಮಕ್ಕಳಾಗದ ಹೊರತು ನಿನಗೆ ತಿಳಿಯುವದಿಲ್ಲಪ್ಪಾ, ಈ ಅಂಜಿಕೆ. ದೊಡ್ಡ ದೊಡ್ಡ ಪುಸ್ತಕಗಳನ್ನು ಓದುವಿ ಭರಭರನೆ ಎಷ್ಟೋ ಕಾಗದಗಳನ್ನು ಬರೆದು ಒಗೆಯುವಿ. ಅದರಲ್ಲಿ ನಿನಗೆ ಎಲ್ಲಿಯೂ ಭೀತಿಯೂ ಅಡ್ಡಗಟ್ಟುವದಿಲ್ಲ! ಆದರೆ ನಾಳೆ ಒಂದು ಮಗುವು ತೊಟ್ಟಿಲಲ್ಲಿ ಅಳಹತ್ತಿತೆಂದರೆ ಮಾತ್ರ ತಿಳಿಯುವದು, ಹೇಗೆ ಜೀವ ಕೆಳಗೆ ಮೇಲಾಗುವದು!"

"ಅದೆಲ್ಲ ಆಗಲಿಕ್ಕೆ ಸ್ವಂತದ್ದೇ ಯಾತಕ್ಕೆ ಬೇಕು ಮಗು? ಜಾನ್ಹ ವಿಗಿಂತಲೂ ನನ್ನನ್ನೇ ಹೆಚ್ಚಾಗಿ ಪ್ರೀತಿಸುವದಿಲ್ಲವೇ ನೀನು? ನನ್ನದಾದರೂ ಅದರಂತೆಯೇ ಜಾನ್ಹವಿಯ ಮಗುವು ಬಂದು ನನಗೆ 'ಮಾವಾ ಮಾವಾ' ಅನ್ನಹತ್ತಿತೆಂದರೆ—"

"ಹನ್ನೊಂದು ಯಾವಾಗಲೋ ಹೊಡೆದು ಹೋಗಿರಬೇಕು. ಇಂದು ಆದಿತ್ಯವಾರವಾದರೂ ಕೂಡ, ನಿನಗೇನೂ ಒಂದು ನಿಮಿಷ ವಿಶ್ರಾಂತಿಯಿಲ್ಲ. ಮಧ್ಯಾನ್ಹದಲ್ಲಿ ನಾಟಕಕ್ಕೆ ಹೋಗಿ ಬಿಟ್ಟೆ, ಮತ್ತು ಬಂದ ಕೂಡಲೆ ಈಗ ಬರೆಯುವದನ್ನು ನಡಿಸಿ ಬಿಟ್ಟೆರುವಿ"

"ಇಷ್ಟು ಈ ಕಥೆಯನ್ನು ಮುಗಿಸಿ ಮಲಗಿ ಬಿಡುವೆ ನೋಡು ಕಕ್ಕೀ."

"ಚಂದ್ರ ಡಾಕ್ಟರರು ರಾತ್ರಿ ವೇಳೆಯಲ್ಲಿ ಬರೆಯಬೇಡವೆಂದು ಹೇಳಿಲ್ಲವೆ ನಿನಗೆ?"

"ಚಂದ್ರ, ಡಾಕ್ಟರರು ಕಣ್ಣುಗಳನ್ನು ಪರೀಕ್ಷಿಸಿ ನೋಡುವರೇನೋ ನಿಜ. ಆದರೆ ಹೃದಯವನ್ನು ಪರೀಕ್ಷಿಸಲಿಕ್ಕೆಲ್ಲಿ ಬರುವದು ಅವರಿಗೆ?"

"ಹೌದು ನೋಡು ಚಂದ್ರ. ಮುಂಜಾನೆ ಒಂಭತ್ತರಿಂದ ಸಂಜೆಯ ಆರರ ವರೆಗೆ ಕಲ್ಲು ಹೇರಿಕೊಂಡು ಕಚೇರಿಯಲ್ಲಿ ಕೆಲಸ ಮಾಡುವದು ಮತ್ತು—"

"ಕಕ್ಕೀ, ಅದನ್ನೇನು ಹೇಳುವಿ. ಹೊಟ್ಟೆಯ ಸಲುವಾಗಿ ಅಷ್ಟಂತೂ ಮಾಡಲೇಬೇಕು! ಈ ಜಗತ್ತಿನಲ್ಲಿ ಎದುರಿನಲ್ಲಿ ಈಶ್ವರನು ಬಂದು ನಿಂತರೂ ಬೆನ್ನಿಗೆ ಹತ್ತಿದ ಹೊಟ್ಟೆಯೇನೂ ಮನುಷ್ಯನನ್ನು ಬಿಡುವಂತಿಲ್ಲ!

"ಹಾಗಾದರೆ, ಏನೂ ಲಾಭವಿಲ್ಲದ ಈ ನಿನ್ನ ಬರೆಯುವ ಓದುವ ಉಪದ್ವ್ಯಾಪ ಯಾತಕ್ಕೆ ಮಾಡಬೇಕು! ಅದರ ಸಲುವಾಗಿಯೇ ನಾಟಕಕ್ಕೆ ಹೋಗಬೇಕಂತೆ. ಒಟ್ಟಿನಲ್ಲೇನು ಕಣ್ಣು ಹಾಳುಮಾಡಿಕೊಂಡು ಜೀವಕ್ಕೆ ತ್ರಾಸು. ಮತ್ತೇನೂ ಇಲ್ಲ"

"ಹೌದು ನೋಡು ಅಣ್ಣಾ. ಆದರೆ ಆ "ವೀಣೆ" ಯ ಸಂಪಾದಕ ಏನು ಹೇಳಿದ ಅಣ್ಣಾ?"

"ಇಂದು ನಾಟಕಕ್ಕೆ ಹೋಗುವ ಮೊದಲು ಹೋಗಿದ್ದೆ. ಅವನ ಕಡೆಗೆ. "ವೀಣೆ" ಯ ವಿಶೇಷಾಂಕದ ಗಡಿಬಿಡಿಯಲ್ಲಿರುವ ಈಗ ಅವ ಮುಂದಿನ ಆದಿತ್ಯವಾರದಷ್ಟೊತ್ತಿಗೆ ಓದಿ ಇಟ್ಟಿರುವೆ ಎಂದು ಹೇಳಿದ. ಏನೂ ಇಲ್ಲವೆಂದರೂ ಕಥೆಗೆ ಹತ್ತುರೂಪಾಯಿ ಸಿಗಬಹುದು ಅಷ್ಟೆ. ಐವತ್ತು ಕಥೆಗಳಿಗೆ ಐನೂರುರೂಪಾಯಿ ಬರುವವು. ನಮ್ಮ ಈ ಬಾಯೀ ಸಾಹೇಬರ ಲಗ್ನದಲ್ಲಿ ಮೇಲಿನ ಖರ್ಚಿಗಾದರೂ ಸಾಲಬಹುದಲ್ಲವೇ ಅಷ್ಟು ಹಣ?''

"ಆದರೆ ನನಗೆ ಲಗ್ನವೇ ಬೇಡವಲ್ಲ!"

"ವಾಃ! ನಾಳೆಯೇ ನಿನ್ನನ್ನು ನೋಡಲಿಕ್ಕೆ ಬ್ಯಾರಿಸ್ಟರ ರತ್ನಾಕರ ಬರುವವನಿದ್ದಾನಲ್ಲ. ಇಷ್ಟರಲ್ಲಿಯೇ ನೀನು ಮಾನಾಪಮಾನದಲ್ಲಿಯ ಭಾಮಿನಿಯಂತೆ ಮಾತಾಡಹತ್ತಿರುವೆಯೇನು? ಅವನನ್ನು ಧೈರ್ಯಧರನನ್ನಾಗಿ ಮಾಡಿಬಿಟ್ಟೆಯಂದರೆ ಆಗಿ ಹೋಯಿತು!"

"ಅವರು ನಿಜವಾಗಿಯೂ ನಾಳಿಗೆ ನೋಡಲಿಕ್ಕೆ ಬರುವರೋ? ಇಲ್ಲದಿದ್ದರೆ ಹೋದಸಾರೆಯಂತೆ ಆಶೀರ್ವಾದವೋ?" ಕಕ್ಕಿಯವರು ಉತ್ಕಂಠೆಯಿಂದ ಕೇಳಿದರು.

"ನಿಜವಾಗಿಯೂ ಬರುವೆನೆಂದು ಹೇಳಿದರು. ನಿನ್ನಿನ ದಿವಸ ಅವ. ರಾದರೂ ನಾಟಕಕ್ಕೆ ಬಂದಿದ್ದರು. ಹೋದ ಸೋಮವಾರ ದಿವಸ ಯಾವದೋ ಮುನಸೂಫರ ಮಗಳನ್ನು ನೋಡಲಿಕ್ಕೆ ಹೋಗಿದ್ದರಂತೆ. ನಾಳೆ ತಪ್ಪದೆ ಬಂದೇ ಬರುವೆನೆಂದು ಹೇಳಿದ್ದಾರೆ!''

"ಅದೆಲ್ಲ ಮನಸ್ಸಿನಲ್ಲಿ ಮಂಡಿಗೆ ತಿಂದಂತೆಯೇ. ಅವರದೂ ನಮ್ಮದೂ ಕೂಡಿ ಬರುವದು ಹೇಗೋ?"

"ಅದೇಕೆ? ಕೂಡಿ ಬರದೆ ಏನು? ಜಾನ್ಹವಿಯಂತೂ ನಕ್ಷತ್ರದಂತೆ ಸುಂದರಳಾಗಿದ್ದಾಳೆ.''

"ಆದರೆ ಈಗಿನ ದಿವಸದಲ್ಲಿ ನಕ್ಷತ್ರಗಳಿಗಿಂತಲೂ ಬಿಳಿಯ ಚಿಕ್ಕೆಗಳಿಗೇ ಮಾನವಿದೆಯಪ್ಪಾ!"

"ರತ್ನಾಕರ ಬ್ಯಾರಿಸ್ಟರ ಇರುವ, ಅವನೇನೂ ಬಹಳ ಬಿಗಿ ಹಿಡಿಯುವದಿಲ್ಲ! ಇದಲ್ಲದೆ ನನ್ನ ಮೂರು ನಾಟಕಗಳೂ, ಕಥೆಗಳೂ ಇದ್ದೇ ಇವೆಯಲ್ಲ. ಈಗ ಮೂರು ವರ್ಷದಿಂದ ಸುಮ್ಮನೆ ಜಾಗರಣೆಮಾಡಿ ಅವನ್ನೆಲ್ಲ ಬರೆದಿರುವೆನೆ?"

"ಕುಲಸ್ವಾಮಿನಿ, ಜಗದಂಬೆ, ನಮ್ಮ ಜಾನ್ಹವಿಯುದಷ್ಟು ಒಳಿತು ಮಾಡಿ ಕೂಡಿಸಿ ಕೊಟ್ಟೆಯೆಂದರೆ, ನಿನಗೆ ಪ್ರತಿವರ್ಷವೂ ಕಾಯಿ ಖಣ ಉಡಿ ತುಂಬುವೆ"

"ಕಕ್ಕೀ ಅವರಿಗೆ ಕೂಡಲಿಕ್ಕೆ ಸ್ಥಳವೆಲ್ಲಿ ಮಾಡಬೇಕು?"

"ಅದೇಕೆ? ನಿನ್ನ ಕೋಣೆಯಂತೂ ಇದ್ದೇ ಇದೆಯಲ್ಲ. ಪುಸ್ತಕಗಳನ್ನೆಲ್ಲ ಸರಿಯಾಗಿ ಇಟ್ಟು ಬಿಟ್ಟರೆ ಆಗಿ ಹೋಯೀತು."

"ಜಾನ್ಹವಿಯು ಮಾಡುವಳು ಅಷ್ಟು ಕೆಲಸ. ಅದನ್ನೇನು ಅವಳಿಗೆ ಹೇಳಬೇಕಾಗಿಲ್ಲ. ಮಾಯೆ ಇಲ್ಲದೆ ಅಳುವು ಬರುವದಿಲ್ಲ ಮತ್ತು—"

"ಅಣ್ಣಾ, ಈಗ ರಾತ್ರಿ ಬಹಳವಾಯಿತು. ಮಲಗಿಕೊಂಡು ಬಿಡು ನೋಡೋಣ ಇನ್ನು"

"ಮಲಗಿಕೊಂಡರೂ ನಿದ್ರೆಯೇನೂ ಹತ್ತುವದು ಶಕ್ಯವಿಲ್ಲ. ಒಂದು ವೇಳೆ ನಿದ್ರೆ ಹತ್ತಿವರೂ ಕೂಡ ಕನಸಿನಲ್ಲಿ ಈ ಕಥೆಯೊಳಗಿನ ಜನರೆಲ್ಲರೂ ಬಂದೇ ಬಿಡುವರು ಅದರಕ್ಕಿಂತಲೂ ಕಥೆಯನ್ನು ಮುಗಿಸಿಯೇ ಮಲಗುವದು ನೆಟ್ಟಗಲ್ಲವೆ?"

ಚಂದ್ರಶೇಖರನು ಎದುರಿನ ಕಿಡಿಕಿಯೊಳಗಿಂದ ಆಕಾಶದ ಕಡೆಗೆ ನೋಡಿದ. ಪ್ರತಿಭಾ ಸಂಪನ್ನ ಕವಿಯ ಮನದಲ್ಲಿ ಹೊಳೆಯುವ ಕಲ್ಪನೆಗಳಂತೆ ಚಿಕ್ಕೆಗಳು ಹೊಳೆಯುತ್ತಿದ್ದವು. ಆದರೆ ವ್ಯವಹಾರ ಮಯವಾದ ಜಗತ್ತಿಗೆ, ಅವುಗಳ ಸೌಂದರ್ಯ, ಅವುಗಳ ದಿವ್ಯ ಸಂದೇಶ, ಅವುಗಳ ಮುಗ್ಧ ನೇತ್ರ ಕಟಾಕ್ಷ, ಇವುಗಳ ಅರಿವು ಇರಲಿಲ್ಲ. ಜಗತ್ತು ಆ ಕ್ಷಣ

ದಲ್ಲಿ ಕಣ್ಣುಮುಚ್ಚಿಕೊಂಡು ಸ್ವಸ್ಥವಾಗಿ ನಿದ್ರೆ ಹೋಗಿತ್ತು. ಆಕಾಶದ ಕಾವ್ಯಮಯ ಕಣ್ಣುಗಳು ಹೋದ ಕೂಡಲೆಯೇ ಜಗವು ಕಣ್ಣುತೆರೆದು ಅದರ ಕಡೆಗೆ ನೋಡಹತ್ತುತ್ತದೆ!

× × × ×

ಎರಡನೆ ದಿವಸ ಮುಂಜಾನೆ ೧೦ ಹೊಡೆದರೂ ಬ್ಯಾರಿಸ್ಟರ ರತ್ನಾಕರನ ಸುಳವಿಲ್ಲ. ಚಂದ್ರಶೇಖರನಂತೂ ಅವನು ಬರುವ ದಾರಿಯಲ್ಲಿ ಕಣ್ಣಿಟ್ಟು ಕುಳಿತಿದ್ದ. ನಡನಡುವೆ ಅವನು ಜಾನ್ಹವಿಯನ್ನು ಕರೆದು ಹೇಳಿತ್ತಿದ್ದ "ಜಾನ್ಹವಿ ನೀನೇ ನೋಡು ಒಂದು ಸ್ವಲ್ಪ, ಬೀದಿಯಲ್ಲಿ ದೂರದಿಂದ ಎಲ್ಲಿಯಾದರೂ ಕಾಣುವರೇನು? ನನಗಂತೂ ಇತ್ತೀಚೆಗೆ ದೂರಿನದು ಏನೂ ಕಾಣದಂತಾಗಿದೆ."

ಅಣ್ಣನ ಈ ಮಾತುಗಳನ್ನು ಕೇಳಿ ಜಾನ್ಹವಿಯು ಕುಳಿತ ಸ್ಥಳದಿಂದ ಏಳದ್ದನ್ನು ನೋಡಿ ಅವನಂದ. "ಇಷ್ಟರಲ್ಲಿ ಆರಂಭವಾಯಿತೇನು ನಾಚಿಕೊಳ್ಳಲಿಕ್ಕೆ?"

ಗಡಿಯಾರದಲ್ಲಿ ಹತ್ತರ ಗಂಟೆ ಬಾರಿಸಿದ್ದನ್ನು ಕೇಳಿ ಚಂದ್ರಶೇಖರನಿಗೆ ಸುಮ್ಮನಿರುವದಾಗಲಿಲ್ಲ. "ಜಾನ್ಹವಿ, ಇದು ನೋಡಿದೆಯಾ ವಿಲಾಯತಿಯ ನಿಯಮಿತತನವನ್ನು?" ಈ ನಿನ್ನ ಭಾವೀಪತಿಯು ವರದಕ್ಷಿಣೆ ಬೇಡುವದಕ್ಕಿಂತಲೂ ಮೊದಲೇ ನನ್ನ ಕಣ್ಣೀರು ಕಪೋಲಗಳವರೆಗೆ ಇಳಿಸುವಂತೆ ಕಾಣುತ್ತಾನೆ!"

ಇಷ್ಟರಲ್ಲಿಯೇ ಒಂದು ಟಾಂಗಾ ಖಡಖಡ ಸಪ್ಪಳಮಾಡುತ್ತ ಚಂದ್ರಶೇಖರನ ಮನೆಯ ಮುಂದೆ ಬಂದು ನಿಂತಿತು. ಆ ವಾಹನವು ನಿಂತಂತೆ ಜಾನ್ಹವಿಯ ಶ್ವಾಸವಾದರೂ ಕ್ಷಣಮಾತ್ರ ನಿಂತಂತೆಯೇ ಆಯಿತು. ಆದರೆ ಮರುಕ್ಷಣಕ್ಕೆ ಅವಳು ಅರುಣೋದಯವಾದ ಕೂಡಲೆ ಅಂತರ್ಧಾನ ಹೊಂದುವ ತಾರೆಯಂತೆ ನಡುಮನೆಯಲ್ಲಿ ಮಾಯವಾದಳು. ಚಂದ್ರಶೇಖರನು ರತ್ನಾಕರನ ಸ್ವಾಗತ ಮಾಡಲಿಕ್ಕೆಂದು ಮುಂದಕ್ಕೆ ಬಂದು ಅಂದ.

"ಏಳು ಸಮುದ್ರದ ಪರ್ಯಟನ ಮುಗಿಸಿ ಬಂದರೂ ಕಡೆಗೆ ಇದ್ದಂತಿರೋ ಸಿದ್ಧೇಶ್ವರನೇ! ವಿಲಾಯತಿಯ ಯಾತ್ರೆಯನ್ನೇನೂ ಮುಗಿಸಿ ಬಂದಿ ಆದರೆ ಅಲ್ಲಿಂದ ನಿಯಮಿತತನವನ್ನೇನು ತರಲಿಲ್ಲ!"

"ತಡವಾದದ್ದೇನೋ ನಿಜ. ಪಂಜಾಬ ಮೇಲು ಬಿಟ್ಟಿದ್ದೆ. ಆದರೆ ಹಾದಿಯಲ್ಲಿ ಸ್ಟೇಶನ್ನುಗಳು ಬಹಳವಾದರೆ ನಾನಾದರೂ ಏನು ಮಾಡಲಿ?"

"ಸ್ಟೇಶನ್ನು ಎಲ್ಲಿಯವು ಮತ್ತೆ? ಹಾದಿಯಲ್ಲಿ ಯಾರಾದರೂ ಪಕ್ಷ ಕಾರರು ಭೆಟ್ಟಿಯಾಗಿರಬೇಕು! ಅಲ್ಲಿಂದ ಎಲ್ಲಿಯವಧೂಪಕ್ಷ, ಎಲ್ಲಿಯ ನೋಟ?"

"ಮುಂಜಾನೆಯಿಂದ ಕೇವಲ ಹುಡಿಗೆಯರನ್ನು ನೋಡುತ್ತ ತಿರುಗು ತಿದ್ದೇನೆ!"

"ಊರಲ್ಲೇನು ಹುಡಿಗೆಯರ ಪ್ರದರ್ಶನ ಇದೆ ಏನು?" ಚಂದ್ರಶೇ ಖರನು ಆತನನ್ನು ತನ್ನ ಪುಸ್ತಕದ ಕೋಣೆಯಲ್ಲಿ ಕರೆದುಕೊಂಡು ಹೋದ. ರತ್ನಾಕರನು ದಣಿದವನಂತೆ ಆರಾಮ ಖುರ್ಚಿಯಲ್ಲಿ ಉಸ್ಸೆಂದು ಮೈ ಚಲ್ಲಿದ."

"ಯಾಕೆ ಬಹಳ ದಣಿದಂತೆ ಕಾಣುತ್ತದೆ?"

"ದಣಿದಂತೆ ಕಾಣಸತಡೆ ಎಂದೇನುಕೇಳುವಿ? ಒಂದು ಹುಡಿಗೆಯನ್ನು ನೋಡಿ ಬರುವದೆಂದರೆ ಒಂದು ಕಾವ್ಯಸಂಗ್ರಹದ ಪರೀಕ್ಷಣ ಮಾಡಿದಂತೆ! ಮುಂಜಾನೆಯಿಂದ ಕೇವಲ ಮೂರುತಾಸಿನ ಅವಧಿಯಲ್ಲಿ ನಾನು ಈಗ ಇಂಥ ಏಳು ಪರೀಕ್ಷಣ ಮುಗಿಸಿ ಬಂದೆ!"

"ಮತ್ತು ಏಳು ಗ್ರಂಥಗಳನ್ನು ಮುಗಿಸಿ ಈಗ ಎಂಟನೆಯದರ ಕಡೆಗೆ ಬಂದಿರುವಿರಿ ಅಲ್ಲವೆ? ನಿಮ್ಮಂಥ ಸುಶಿಕ್ಷಿತರಿಗೆ ಇದೆಲ್ಲ ಸರಿಹೋಗುವದಾ ದರೂ ಹೇಗೆ? ಹುಡಿಗೆಯರೆಂದರೇನು ಕಾಲೊಳಗಿನ ಜೋಡುಗಳೇ? ಅಥವಾ ಮೋರೆ ಒರಿಸಿಕೊಳ್ಳುವ ವಸ್ತ್ರಗಳೇ? ಒಂದು ಅಂಗಡಿಯಲ್ಲಿ ಒಳ್ಳೇ ಮಾಲು ಸಿಗದಿದ್ದರೆ ನಡೆದರು ಎರಡನೆ ಅಂಗಡಿಗೆ!"

"ನೀನು ಹೇಳುವದೇನೂ ಸುಳ್ಳಲ್ಲ. ಮನೆಯಲ್ಲಿ ತಂದೆಯವರು ಹೇಳಿದ್ದನ್ನು ಮಾಡಬೇಕಾಗಿದೆ. ಮತ್ತು ಅವರಂತೂ ನನ್ನನ್ನು ಚತುರ್ಭುಜನನ್ನಾಗಿ ಮಾಡಿಯೇ ತೀರುವೆನೆಂದು ಪ್ರತಿಜ್ಞೆ ತೊಟ್ಟಂತೆ ತೋರುತ್ತದೆ!"

"ತಾವು ಪ್ರತಿಜ್ಞೆಯನ್ನು ಮಾಡಿ, ಲಗ್ನದ ದಿಗ್ವಿಜಯಕ್ಕಾಗಿ ನಿಮ್ಮನ್ನು ಹೊರಗೆ ಬಿಟ್ಟಿರುವರು ಅಲ್ಲವೆ? ಆದರೆ ನಿಮ್ಮನ್ನೇನೂ ನಾವು ಇನ್ನು ಮುಂದಕ್ಕೆ ಬಿಡುವದಿಲ್ಲವೆಂಬದನ್ನು ನೀವು ಮರೆಯಬೇಡಿರಿ"

"ನಿನ್ನಂಥ ಶಾಲೆಯ ಗೆಳೆಯ ಬೀಗನಾಗುವದು ನನಗೇನು ಬೇಡವಾಗಿದೆಯೇನು?"

"ನಿನಗೆ--ನಿಮುಗೆ ಬೇಡವಾಗದಿದ್ದರೆ ಆಗಿ ಹೋಯಿತು.' ರತ್ನಾಕರನಿಗೆ ಬಹಳ ತಡವಾದೀತೆಂದು ಚಂದ್ರಶೇಖರನು ಒಳಕ್ಕೆ ಹೋಗಿ, ಸ್ವಲ್ಪ ಕಾಲದಲ್ಲಿಯೇ ಫಲಾಹಾರದೊಂದಿಗೆ ಜಾನ್ಹವಿಯನ್ನು ಕರೆದುಕೊಂಡು ಬಂದ. ಜಾನ್ಹವಿಯು ಸುಂದರಳಾಗಿ ಕಾಣಬೇಕೆಂತಲೇ ಲಜ್ಜೆಯು ಅವಳ ಹಣೆಯ ಮೇಲೆ ಬೆವರು ಹನಿಗಳ ಸುಂದರ ಮಾಲೆಯನ್ನು ಹೆಣೆದಂತೆ ತೋರುತ್ತಿತ್ತು. ರತ್ನಾಕರನೂ ಚಂದ್ರಶೇಖರನೂ ಇಬ್ಬರೂ ಆಗ್ರಹ ಮಾಡಿದ ಮೇಲೆ ಅವಳು ಹಾಗೂ ಹೀಗೂ ಖುರ್ಚಿಯಲ್ಲಿ ಕುಳಿತುಕೊಂಡಳು; ಆದರೆ ಇಂದು ಅವಳ ಮುಖದ ಮೇಲೆ ಗುರುತ್ವಾಕರ್ಷಣದ ಶಕ್ತಿಯ ಪ್ರಭಾವವು ದಿನಕ್ಕಿಂತಲೂ ಹೆಚ್ಚಾಗಿ ಕಂಡುಬರುತ್ತಿತ್ತೆಂಬದು ಸ್ಪಷ್ಟವಾಗಿ ಕಾಣುತ್ತಿತ್ತು!

ಪ್ರಶ್ನೋತ್ತರದ ಕೆಲಸ ತೀರಿದ ಕೂಡಲೆ ರತ್ನಾಕರನು ಹೊರಡಲು ಸಿದ್ಧನಾದ. ಚಂದ್ರಶೇಖರನು ಅವನನ್ನು ಕಳಿಸಲಿಕ್ಕೆಂದು ಟಾಂಗಾದವರೆಗೂ ಹೋದ. ಜಾನ್ಹವಿಯು ಸತೃಷ್ಣ ದೃಷ್ಟಿಯಿಂದ ಅವರಿಬ್ಬರ ಕಡೆಗೂ ನೋಡುತ್ತಿದ್ದಳು. ಅವರಿಬ್ಬರೂ ಕೆಲಹೊತ್ತು ಮಾತಾಡುತ್ತ ನಿಂತು ಕಡೆಗೆ ಅತಿ ಪ್ರೇಮದಿಂದ ಹಸ್ತಾಂದೋಲನವಾದ ಕೂಡಲೆ ರತ್ನಾಕರನೊಡನೆ ವಾಹನವು ಹೋಯಿತು.

ಚಂದ್ರಶೇಖರನು ತನ್ನಷ್ಟಕ್ಕೆ ವಿಚಾರ ಮಾಡುತ್ತ ಒಳಗೆ ಬಂದ "ನಿನ್ನ ತಂಗಿ ಬಹಳ ಬುದ್ಧಿವಂತಿಯಾಗಿದ್ದಾಳೆ. ಹೀಗೆಯೇ ಅಂದನಲ್ಲವೇ ಅವ? ಜಾನ್ಹವಿಯ ಬುದ್ಧಿಯು ಅವಳ ಮುಖಚರ್ಯೆಯಷ್ಟೇ ತೇಜೋ ಮಯ, ಅವಳ ಕಣ್ಣುಗಳಷ್ಟೇ ತೀಕ್ಷ್ಣವಾಗಿದೆ ಅವಳಿಗೆ ಈ ಉತ್ತಮ ಸ್ಥಳವನ್ನು ದೊರಕಿಸಿಕೊಟ್ಟು, ನಾನು ಋಣಮುಕ್ತನಾದನೆಂದರೆ ತಂದೆ ಯವರ ಆತ್ಮಕ್ಕೆಷ್ಟು ಶಾಂತಿ! ಆದರೆ ಹಣವೊಂದು ಬೇಕಲ್ಲ. ರತ್ನಾಕರ ನೇನೂ ವರದಕ್ಷಿಣೆ ಬೇಡುವಂತಿಲ್ಲ. ಮೇಲಿನ ಖರ್ಚಿಗೆ ಬೇಕಾಗುವ ಹಣ ವೇನು? ನನ್ನ ಕಥೆಗಳಿಂದ ಬಂದೇ ಬರುತ್ತದೆ."

ಈ ವಿಚಾರಗಳ ಕೂಡ ಅವನ ಮುಖದ ಮೇಲೆ ಸೂಕ್ಷ್ಮವಾದ ಮಧುರಸ್ಮಿತವೊಂದು ಹಾಯ್ದು ಹೋಯಿತು. ಮೇಲೆ ಪ್ರಖರವಾಗಿ ಪ್ರಕಾಶಿಸುವ ಸೂರ್ಯನ ಕಡೆಗೆ ಅವನು ನೋಡಿದ್ದರೆ ಸೂರ್ಯನು ಅವ ನನ್ನು ಕೇಳಬಹುದಾಗಿತ್ತು. "ಚಂದ್ರಶೇಖರ, ನಿನ್ನೆ ರಾತ್ರಿಯ ತಾರೆಗಳು ಎಲ್ಲಿವೆ ಈಗ?''

ಚಂದ್ರಶೇಖರನ ಕಣ್ಣುಗಳಲ್ಲಿ ಜಾನ್ಹವಿಯು ಆಕಳ ಹಾಲಿನ ಹನಿ ಗಳನ್ನು ಬಿಡುತ್ತಿದ್ದಳು. ಇಂದು ಆದಿತ್ಯವಾರವಾಗಿದ್ದ ಮೂಲಕ ಕಕ್ಕಿ ಯವರಾದರೂ ಒಲೆಯ ಆರಾಧನೆಯನ್ನು ನಿಲ್ಲಿಸಿ ಅಲ್ಲಿಯೇ ಬಂದು ಕುಳಿ ತಿದ್ದರು.

"ಚಂದ್ರ, ಅಕಳ ಹಾಲಿನಿಂದ ಏನಾದರೂ ಒಳಿತೆನಿಸುವದೇನೋ? ನನ ಗಂತೂ ನಿನ್ನ ಕಣ್ಣುಗಳ ವಿಷಯದಲ್ಲಿ ವಿಪರೀತ ಅಂಜಿಕೆಯಾಗಿಬಿಟ್ಟಿದೆ."

"ನನ್ನ ಕಣ್ಣುಗಳ ಅಂಜಿಕೆಯೇ ನಿನಗೆ? ಅದೇಕೆ? ನಾನೆಂದಾದರೂ ನಿನ್ನ ಮೇಲೆ ಸಿಟ್ಟಿಗೆದ್ದಿರುವೆನೇ?" ಚಂದ್ರಶೇಖರನು ಚೇಷ್ಟೆಯ ಸ್ವರದಲ್ಲಿ ಕೇಳಿದ

"ನಿನ್ನ ಈ ಚೇಷ್ಟೆಮಾಡುವ ಚಟವು ಹೋಗುವದಾದರೂ ಎಂದು?" ಜಾನ್ಹವಿಯು ಕೇಳಿದಳು.

"ಕೋಟ್ಯಾಧೀಶನಾದ ನಂತರ!"

"ಕಥೆ ನಾಟಕಗಳಿಂದೇನೇ ಅಲ್ಲವೆ ನೀನು ಕೋಟ್ಯಾಧೀಶನಾಗಬೇಕೆನ್ನುವದು? ಅವರಲ್ಲಿಯು ಕೋಟ್ಯಾಧೀಶನೇ ಆಗಬಹುದು ಬಹಳವಾದರೆ. ಪಲ್ಲೆ ಮಾರಿದಷ್ಟೇನೂ ಹೂಗಳು ಮಾರುವದಿಲ್ಲ ಪೇಟೆಯಲ್ಲಿ!"

"ಚಂದ್ರಾ. ಆ ರತ್ನಾಕರನು ಇನ್ನೂ ಏನೂ ತಿಳಿಸಲೇ ಇಲ್ಲವಲ್ಲ? ಸೋಮವಾರ ಸೋಮವಾರ ಎಂಟು; ನಾಳಿಗೆ ಎಂಟು ದಿವಸವಾಗಿ ಹೋಯಿತು ಅವರು ಹುಡಿಗೆಯನ್ನು ನೋಡಿ ಹೋಗಿ?"

"ತಾವಾಗಿಯೇ ಬಂದು ತಿಳಿಸುವೆನೆಂದು ಹೇಳಿರುವರು ಅವರು. ಆದರೆ—"

"ಆದರೆ ಏನು? ನೀನೇನಾದರೂ ತಿಳಿದಿರಬೇಕು, ಶಾಲೆಯಲ್ಲಿಯ ಗೆಳೆತನದ ಉಪಯೋಗವೇನಾದರೂ ಆಗಬಹುದೆಂದು. ಆದರೆ ಲಗ್ನದ ವಿಷಯದಲ್ಲಿ ಯಾರು ಯಾರನ್ನೂ ಕೇಳುವದಿಲ್ಲ. ಯಾತಕ್ಕೆ ಬೇಕಪ್ಪ ನಮ್ಮ ಸಣ್ಣ ಬಾಯಿಗೆ ಇಷ್ಟು ದೊಡ್ಡ ತುತ್ತು? ಸ್ವರ್ಗದಲ್ಲಿಯ ಗಂಗೆಯನ್ನು ಶಂಕರನು ತಲೆಯಮೇಲೆ ಇರಿಸಿಕೊಂಡನೆಂದು, ರಾಜಾಪೂರದಲ್ಲಿಯ ಗಂಗೆಯನ್ನೂ ತಲೆಯಮೇಲೆ ಇರಿಸುವದುಂಟೆ?"

ಚಂದ್ರಶೇಖರನು ನಗುತ್ತ ಹೇಳಿದ "ಕಕ್ಕೀ, ನೀನಂತೂ ಇಂದು ಜಾನ್ಹವಿಯ ಕಡೆಗೆ ಕಾಕದೃಷ್ಟಿಯಿಂದ ನೋಡುತ್ತಿರುವಿ. ಶುಕ್ರನ ತೇಜಸ್ಸಿಗೆ ಮಣ್ಣಿನ ಪಣತಿಯನ್ನುವದರಲ್ಲಿ ನಿನಗೇನು ವಿಶೇಷವೆನಿಸುವದಿಲ್ಲವೇ?"

"ಎಲ್ಲವೂ ಅನಿಸುವದು. ಆದರೆ ಉಪಯೋಗವೇನು? ಹಾಗೆ ವಿಚಾರ ಮಾಡುತ್ತ ಜಗತ್ತಿನ ಕಡೆಗೆ ನೋಡಿದರೆ ಮನಸೆಲ್ಲವೂ ಹರಿದಂತೆ ಕ್ಷೋಭಗೊಳ್ಳುತ್ತದೆ. ಇಲ್ಲಿಯ ಮುಂಬಯಿಯ ಬಿ. ಎ. ಪಾಸಾದವ ಎರಡು ಸಾವಿರಕ್ಕೂ ಮಿಸುಕುವದಿಲ್ಲ! ಇವರಂತೂ ವಿಲಾಯತಿಯಿಂದ ಪರೀಕ್ಷೆ ಪಾಸಾಗಿ ಬಂದವರು!"

"ಕಕ್ಕೀ, ನೀನೇನೂ ಚಿಂತೆ ಮಾಡಬೇಡ. ಬರುವ ಮಾಘಮಾಸದಲ್ಲಿ, ಜಾನ್ಹವಿಯ ಲಗ್ನದ ಗಡಿಬಿಡಿಯಲ್ಲಿ ನಿನಗೆ ಒಂದು ಚಹದ ಗುಟುಕು ಕುಡಿಯುವಷ್ಟೂ ವೇಳೆ ಸಿಗಲಿಕ್ಕಿಲ್ಲ. ಈ ಬಾಯಿಸಾಹೇಬರು ಬ್ಯಾರಿಸ್ಟರ ಸಾಹೇಬರ ಯಜಮಾನತಿಯಾಗುವದೆಂದಂತೂ ಕರಿಯಕಲ್ಲಿನ ಮೇಲಿನ ಗೆರೆ ಇದ್ದಂತೆಯೇ!"

ಚಂದ್ರಶೇಖರನು ಎದ್ದು ಅರಿವೆಗಳನ್ನು ಹಾಕಿಕೊಂಡು ಹೊರಗೆ ಹೋಗಲು ಸಿದ್ಧನಾದ. ಹೋಗ ಹೋಗುತ್ತ ಅವ ಜಾನ್ಹವಿಗೆ ಹೇಳಿದ ಇದು ನೋಡು! ರತ್ನಾಕರ ಒಂದು ವೇಳೆ ಬಂದರೆ ನಾನಿದೇ ಕ್ಷಣಮಾತ್ರದಲ್ಲಿ ಬರುವೆನೆಂದು ಹೇಳು. ಆ "ವೀಣೆ"ಯ ಸಂಪಾದಕನ ಕಡೆಗೆ ಹೋಗಿ ಬರುವೆ. ಅಷ್ಟೇನೂ ನಾಚಿಕೊಳ್ಳುವ ಕಾರಣವಿಲ್ಲ. ಮಾತಾಡಲಾರದೆ ಇರುವದರ ಮೋಜು ಲಗ್ನವಾದ ನಂತರ; ಮೊದಲಲ್ಲ!"

ಚಂದ್ರಶೇಖರನು "ವೀಣೆ"ಯ ಕಚೇರಿಯನ್ನು ತಲುಪಿದ. ಸಂಪಾದಕರ ಮೇಜು ಪೋಸ್ಟಿನ ಪೆಟ್ಟಿಗೆಯಂತೆ ತರತರದ ಕಾಗದಪತ್ರಗಳಿಂದ ತುಂಬಿ ಹೋಗಿತ್ತು. ಸಂಪಾದಕರು ಬೀಡಿ ಸೇದುತ್ತ, ಬಹಳವಾಗಿ ಹೊಗೆಬಿಡುತ್ತ ಯಾತರದೋ ಸೂಕ್ಷ್ಮ ನಿರೀಕ್ಷಣೆಯನ್ನು ನಡೆಸಿದ್ದರು. ಚಂದ್ರಶೇಖರನನ್ನು ನೋಡುತ್ತಲೇ "ಬರ್ರಿ, ಬರ್ರಿ ಇಲ್ಲಿ ಕುಳಿತುಕೊಳ್ಳಿರಿ" ಎನ್ನುತ್ತ ಬದಿಯಲ್ಲಿಯ ಖುರ್ಚಿಯನ್ನು ಮುಂದಕ್ಕೆ ಸರಿಸಿದರು.

ಸ್ವಲ್ಪವೇಳೆಯಾದ ನಂತರ ಚಂದ್ರಶೇಖರ ಕೇಳಿದ.

"ಓದಿದ್ರೇನು? ಆ ಕಥೆಗಳನ್ನು?"

ಅಲ್ಲಿ ಇಲ್ಲಿ ಚಾಳಿಸಿನೋಡಿದ! ನಾಲ್ಕಾರು ಮಾತ್ರ ಒಳ್ಳೇಯವಾಗಿವೆ ಒಳ್ಳೇಯವೆಂದರೇನು? ಹಾಗೂ ಹೀಗೂ ನಡೆಯಬಹುದಷ್ಟೇ! ಆದರೆ—"

"ಆದರೆ ಏನು?"

"ಈಗಿನ ಕಾಲದಲ್ಲಿ ಅವೇನೂ ಲೋಕಪ್ರಿಯವಾಗುವಂತಿಲ್ಲ. ಅವುಗಳಲ್ಲಿ ನಾಯಕ ನಾಯಿಕೆಯರೇನೋ ಇದ್ದಾರೆ. ಆದರೆ ಅವರ ಶೃಂಗಾರ

ಎಲ್ಲಿಯೂ ಕಂಡು ಬರುವದಿಲ್ಲ. ನಿಮ್ಮ ಏಳು ಕಥೆಗಳಲ್ಲಿ ಒಂದೂ ಖೂನಿ ಇಲ್ಲ! ಒಂದೆರಡು ಕಥೆಗಳಲ್ಲೇನೋ ಮರಣವಿದ್ದರೂ ಕೂಡ ಅದು ಜ್ವರದಂಥ ಸಣ್ಣಪುಟ್ಟ ಬೇನೆಯಿಂದಲೇ! ನಿಮ್ಮ ಒಂದು ಪಾತ್ರಕ್ಕೂ ಪಿಸ್ತೂಲಿನ ಉಪಯೋಗ ಗೊತ್ತಿದ್ದಂತೆ ಕಾಣುವದಿಲ್ಲ. ಇದು ನೋಡಿರಿ, ರಾಯರೆ, ಬ್ರಿಟಿಷ ಸರಕಾರವು ಮಾಡಿದ ಶಸ್ತ್ರಗಳ ಕಾಯದೆಯು ಕಥೆಗಳಿಗೇನೂ ಹತ್ತುವದಿಲ್ಲ!"

"ಆದರೆ ನಾನು ಸಾಧಾರಣವಾಗಿ ಕಂಡುಬರುವ ಸಾಮಾಜಿಕ ಪ್ರಶ್ನೆಗಳನ್ನು—"

"ನಿಮ್ಮ ಆ ಪ್ರಶ್ನೆ ಮತ್ತು ಉತ್ತರಗಳ ವಿಷಯವಾಗಿ ವಿಚಾರ ಮಾಡಲಿಕ್ಕೆ ಸಮಾಜವೆಂದರೇನೂ ಶಾಲೆಯಲ್ಲಿಯ ವಿದ್ಯಾರ್ಥಿಯಲ್ಲ! ಅವರಿಗೆ ಬೇಕಾದದ್ದು ಸೆನ್ಸೇಶನ್! ಧಡ ಧಡ ಎದೆ ಹಾರಿಸುವ ಪ್ರಸಂಗ, ಮೈಮೇಲೆ ನವಿರೆಬ್ಬಿಸುವ ವರ್ಣನೆ, ಬೊಟ್ಟುಕಚ್ಚಿಕೊಳ್ಳಬೇಕಷ್ಟು ಅತ್ಯಾಚಾರ!— ಈ ನಿಮ್ಮ ಏಳು ಕಥೆಗಳಲ್ಲಿ ಒಂದಾದರೂ ಚುಂಬನವಿದೆಯೆ? ನಿಮ್ಮ ಎಲ್ಲ ನಾಯಕ ನಾಯಿಕೆಯರು, ತಮ್ಮ ಬಾಲ್ಯವನ್ನು ಶುಕಾಚಾರ್ಯ, ಭೀಷ್ಮಾಚಾರ್ಯ, ಹನುಮಂತ ದೇವರು, ಇಂಥವರ ಕೈಯಲ್ಲಿಯೇ ಕಳೆದಂತೆ ಕಾಣುತ್ತದೆ. ಈಗಿನ ಕಾಲದಲ್ಲಿ ಚುಂಬನ ಮತ್ತು ಆಲಿಂಗನ ಇವೆರಡುಗಳೆಂದರೆ, ವಾಚಕರ ಮೇಲೆ ವಿಜಯ ಸಂಪಾದಿಸಬಹುದಾದಂಥ ಭಯಂಕರ ತೋಫುಗಳೇ ಆಗಿವೆ! ರಾಯರೆ! ಕಥೆಯೊಳಗಿನ ಒಂದು ಚುಂಬನವು, ಲೇಖಕನ ಐವತ್ತು ಪುಟಗಳು ಸಾಧಿಸಲಾರದ್ದನ್ನು ಕ್ಷಣಮಾತ್ರದಲ್ಲಿ ಸಾಧಿಸಿಬಿಡುವದು!

"ಆದರೆ, ಕಲೆಯ ನಿರ್ಮಲಗಂಗೆಯೆತ್ತ? ಮತ್ತು ವಾಙ್ಮಯದ ಹೆಸರಿನಲ್ಲಿ ಸಾಗುತ್ತಿರುವ ಈ ಹೊಲಸು ಹಳ್ಳದ ನೀರೆತ್ತ?"

"ನೀವು ಈ ರೀತಿಯಾಗಿ ಕಥೆಗಳನ್ನು ತಿದ್ದಿಕೊಟ್ಟಲ್ಲಿ ಪ್ರತಿಯೊಂದಕ್ಕೂ ಹತ್ತು ರೂಪಾಯಿಯಂತೆ ಕೊಡಲಿಕ್ಕಾಗಬಹುದು. ಕಥೆಯಲ್ಲಿಯ ಪಾತ್ರಗಳಿಗೆ ವ್ಯಭಿಚಾರ ಮಾಡಿ ನರಕದಲ್ಲಿ ನರಳಬೇಕಾದರೂ, ಅವುಗ

ಳನ್ನು ಚಿತ್ರಿಸುವ ಲೇಖಕನಿಗೆ ಇಲ್ಲಿ ಸ್ವರ್ಗಸುಖವನ್ನು ಅನುಭವಿಸಲಿಕ್ಕೆ ಸಿಗುವದೆನ್ನುವದನ್ನು ನೀವು ಮರೆಯತಕ್ಕದ್ದಲ್ಲ!"

"ವೇಶ್ಯೆಯ ಮಂಚವನ್ನು ಸಿಂಗರಿಸುವದಕ್ಕಿಂತ ಹೂವು ಅರಣ್ಯ ದಲ್ಲಿಯೇ ಬಾಡಿಹೋದಲ್ಲೇನು ಕೆಡಕು?"

ಚಂದ್ರಶೇಖರನು ತನ್ನ ಕಥೆಗಳನ್ನೆಲ್ಲ ತೆಗೆದುಕೊಂಡು 'ವೀಣೆ'ಯ ಕಚೇರಿಯೊಳಗಿಂದ ಹೊರಬಿದ್ದ. ಮದಿರೆ, ವೇಶ್ಯೆ, ಮತ್ತು ಕಲೆ—ಇವೆ ಲ್ಲವುಗಳನ್ನು ಬಹುಜನ ಸಮಾಜವು ಸರಿಯಾಗಿಯೇ ಎಣಿಸುವದಲ್ಲವೆ? ವಾಙ್ಮಯವಾದರೂ ಸೆರೆಯಂತೆ ನಿಶೆ ತಂದು ಬಿಟ್ಟರೆ ಆಗಿಹೋಯಿತು! ಜಾಗ್ರತಿಯನ್ನುಂಟುಮಾಡುವ ಧರ್ಮವುಳ್ಳದ್ದೇ ನಿಶೆಯನ್ನು ತರಬೇಕು! ಪಶುವೃತ್ತಿಗೆ ಉತ್ತೇಜನಕೊಡುವ ಕಥೆಗಳೇಬೇಕು! ದೇವಪದಕ್ಕೆ ಕರೆದೊ ಯ್ಯುವ ವಿಚಾರಗಳು ಬೇಡ! ನೆಲಮನೆಯ ವಾತಾವರಣವೇ ಬೇಕಲ್ಲದೆ, ಹಿಮಾಲಯದ ಹವೆ ಬೇಡ. ಇದೆಲ್ಲವೂ ಕಲ್ಪವೃಕ್ಷದ ಕಟ್ಟಿಗೆಯನ್ನು ಒಲೆಗಾಗಿ ಉರಿದು ವಿಷವೃಕ್ಷದ ಫಲಕ್ಕಾಗಿ ಹಾತೊರೆದಂತೆಯೇ ಅಲ್ಲದೆ ಮತ್ತೇನು?

ಅವನ ಮನಸ್ಸಿನಲ್ಲಿ ಇಂಥ ವಿಚಾರಗಳೇ ಕುಣಿಯುತ್ತಿದ್ದವು ಕ್ಷುಬ್ಧ ವಾದ ಹೃದಯದಿಂದ ಚಂದ್ರಶೇಖರನು ಮನೆಯ ಕಡೆಗೆ ಸಾಗಿದ್ದ. ದಾರಿ ಯಲ್ಲಿ ಅವರ ಮನೆಯ ಭಾಗದ ಪೋಸ್ಟಮನ್ನನು ಒಂದು ಪತ್ರವನ್ನು ಕೊಟ್ಟ. ಅದನ್ನು ನೋಡಿದ ಕೂಡಲೆ ಅದು ರತ್ನಾಕರನದೆಂದು, ಅದರ ಎಡಭಾಗದಲ್ಲಿ ಮುದ್ರಿಸಿದ ವಿಳಾಸದ ಮೇಲಿಂದ ತಿಳಿಯುವಂತಿದ್ದು ಕಂಪಿ ಸುವ ಕೈಗಳಿಂದ ಚಂದ್ರಶೇಖರನು ಅದನ್ನು ಒಡೆದು ಓದತೊಡಗಿದಃ-

"....ತಂದೆಯವರು ಹೇಳಿದ್ದೇ ಪೂರ್ವವೆನ್ನುವದು ನನಗೆ ಪ್ರಾಪ್ತ ವಿದೆ. ಐದು ಸಾವಿರಕ್ಕೊಂದು ರೂಪಾಯಿಯಾದರೂ ಕಡಿಮೆ ವರದಕ್ಷಿಣೆ ಯನ್ನು ತೆಗೆದುಕೊಳ್ಳುವದಿಲ್ಲವೆಂದು ಅವರು ನಿಶ್ಚಯಿಸಿಬಿಟ್ಟಿದ್ದಾರೆ. ಅವರ ನಿಶ್ಚಯವೆಂದರೆ ಬ್ರಹ್ಮಲಿಖಿತ! ಅವರ ವಿರುದ್ಧವಾಗಿ ಮಾತೆತ್ತುವದು ನನಗಂತೂ ಶಕ್ಯವಿಲ್ಲ. ಒಂದು ಕಡೆಗೆ ಕೆರೆಯಾದರೆ ಇನ್ನೊಂದು ಕಡೆಗೆ

ಬಾವಿ ಎನ್ನುವಂತೆ ನನ್ನ ಸ್ಥಿತಿಯಾಗಿದೆ. ನಿನ್ನ ಸಾಂಪತ್ತಿಕ ಸ್ಥಿತಿಯನ್ನು ನಾನು ಒಳಿತಾಗಿ ಬಲ್ಲೆನು. ಆದರೆ ನಾನೇನು ಮಾಡಲಿ? ಇಂಗ್ಲಂಡಿಗೆ ಹೋಗಿ ಬಂದು .ನಾನೊಂದು ತಂದೆಯವರ ಕೈಯೊಳಗಿನ ಗಿಳಿಯಾದಂತಾಗಿದ್ದೇನೆ. ಅವರಿಟ್ಟ ಬಂಗಾರದ ಪಂಜರದೊಳಗಿನಿಂದ ಹಾರಿಹೋಗುವದು ನನಗೆ ಶಕ್ಯವಿಲ್ಲ. ನನ್ನ ಈ ಸ್ವಭಾವದ ವಿಷಯದಲ್ಲಿ ನಿನ್ನ ಕ್ಷಮೆ ಇರಬೇಕು. ಪತ್ರಕ್ಕೆ ಉತ್ತರವನ್ನು ಬರೆಯದಿರಬೇಡ. ಯಾಕಂದರೆ, ವಧುವು ಗೊತ್ತಾಗಿರದಿದ್ದರೂ ತಂದೆಯವರು ಮಾಘಮಾಸದಲ್ಲಿಯ ಮುಹೂರ್ತವನ್ನು ನಿಶ್ಚಯಿಸಿಕೊಂಡು ಬಿಟ್ಟಿದ್ದಾರೆ."

ರತ್ನಾಕರನು ವರದಕ್ಷಿಣೆಯನ್ನು ಅಪೇಕ್ಷಿಸಲಿಕ್ಕಿಲ್ಲವೆಂದೂ, ಮತ್ತು ಆತನ ಮನಸ್ಸಿಗೆ ಜಾನ್ಹವಿಯು ಸಂಪೂರ್ಣವಾಗಿ ಬಂದಿರಬಹುದೆಂದೂ ಭಾವಿಸಿಕೊಂಡ ಮೂಲಕವೇ, ಚಂದ್ರಶೇಖರನ ದರಿದ್ರ ಕಲ್ಪನಾಪರ್ವತವು ಆಕಾಶದ ವರೆಗೂ ಬೆಳೆದಿತ್ತು. ರತ್ನಾಕರನ ಪತ್ರವು ಆತನಿಗೆ ವಜ್ರಾಘಾತದಂತಾಗಿ ಆತನ ಕಲ್ಪನಾಪರ್ವತದ ಪಕ್ಕಗಳು ಕಡಿಗುಬಿದ್ದಂತಾದವು. ಕ್ಷಣಮಾತ್ರ, ಮಧ್ಯಾಹ್ನದ ಬಿಸಿಲಿನಲ್ಲಿಯೂ ಅವನಿಗೆ ಸುತ್ತಲೂ ಕತ್ತಲೆ ಕಾಣಿಸಿತು. ಮರುಕ್ಷಣವೇ ಅವನು ಎಚ್ಚತ್ತು ಅವನು ಅಂದುಕೊಂಡ "ಏನೂ ಅಡ್ಡಿಯಿಲ್ಲ. ಜಾನ್ಹವಿಯಂಥ ರತ್ನವನ್ನೇನೂ ನಾನು ಒಂದು ಮಂಗನ ಕೊರಳಲ್ಲಿ ಕಟ್ಟುವದಿಲ್ಲ. ಅದನ್ನು ಅರಸನಿಗೆಯೇ ಒಪ್ಪಿಸಬೇಬೇಕೆಂದ ಮೇಲೆ, ರಾಜಗೃಹದಲ್ಲಿ ಪ್ರವೇಶಿಸುವ ಸಲುವಾಗಿಯಾದರೂ ದ್ವಾರಪಾಲಕನಿಗೆ ಏನಾದರೂ ಕೈಯಲ್ಲಿಡಲೇಬೇಕು. ಕಕ್ಕಿಯು ನನ್ನನ್ನು ದೊಡ್ಡವನನ್ನಾಗಿ ಮಾಡಿ ವಾಙ್ಮಯದಲ್ಲಿ ಅಭಿರುಚಿಯನ್ನುಂಟುಮಾಡಿದಳು. ಇದರ ಋಣವನ್ನು ನಾನು ಜಾನ್ಹವಿಯನ್ನು ಒಳ್ಳೇ ಸ್ಥಳದಲ್ಲಿ ಲಗ್ನಮಾಡಿಕೊಟ್ಟು ತೀರಿಸಬೇಕು. ನನ್ನ ಮೂರು ನಾಟಕಗಳಂತೂ ಇದ್ದೇ ಇವೆಯಲ್ಲ! ಐದು ಸಾವಿರ ರೂಪಾಯಿಯದೇನು? ಕ್ಷಣಮಾತ್ರದಲ್ಲಿ ಸಿ ಬಹುದು!" ಈ ವಿಚಾರದೊಂದಿಗೆ ಅವನು ಮೇಲಕ್ಕೆ ನೋಡಿದ. ಸೂರ್ಯನ ಪ್ರಖರನಾಗಿದ್ದ. ಪೃಥ್ವಿಯು ತಾಪದಿಂದ ಬಿಸುಸುಯ್ಯುತ್ತಿತ್ತು. ಚಂದ್ರ

ಶೇಖರನು ಕೆಳಗೆ ಮೋರೆ ತಿರುವಿದೊಡನೆಯೆ ಪೃಥ್ವಿಯು ಅವನನ್ನು ಕೇಳು ವಂತಿತ್ತು "ಏನು ಕವಿರಾಜ, ಸೂರ್ಯನಂತೆ, ಯಾರಾದರೂ ಚಂದ್ರನಿಗೆ ಅರ್ಘ್ಯಗಳನ್ನು ಕೊಟ್ಟದ್ದನ್ನು ನೋಡಿರುವಿರಾ?"

× × × × ×

ಚಂದ್ರಶೇಖರನು ಮನೆಗೆ ಬಂದಕೂಡಲೆ "ನಿನ್ನ ತಂದೆಯು ಇಚ್ಛೆಯಂತೆ ಜಾನ್ಹವಿಯೊಂದಿಗೆ ಐದು ಸಾವಿರ ರೂಪಾಯಿ ವರದಕ್ಷಿಣೆ ಕೊಡುವ ಇಚ್ಛೆಯು ನನ್ನದಿದೆ. ನನ್ನ ಕಡೆಯಿಂದ ಕೊನೆಯ ಮಾತು ಬರುವ ತನಕ ಎರಡನೆ ಕಡೆಯಲ್ಲಿ ಎಲ್ಲಿಯೂ ಮಾತುಕೊಡಬಾರದು. ಎಂಟು ದಿವಸಗಳ ಒಳಗಾಗಿ ನನಗೆ ಹೇಳಬೇಕಾದದ್ದನ್ನು ತಿಳಿಸುವೆ" ಎಂಬರ್ಥದ ಒಂದು ಪತ್ರವನ್ನು ರತ್ನಾಕರನಿಗೆ ಬರೆದು ಕಳಿಸಿದ.

ಊಟವಾದ ಕೂಡಲೇ ಹೊರಗೆ ಹೊರಟ ಚಂದ್ರಶೇಖರನನ್ನು ಕಂಡು ಕಕ್ಕಿಯವರಂದರು "ಇಂಥ ಭರತಿ ಬಿಸಿಲಲ್ಲಿ ಎಲ್ಲಿಗೆ ಹೊರಟೆ? ಮೊದಲೇ ನಿನ್ನ ಕಣ್ಣುಗಳು ಅದುವು; ಅದರಲ್ಲಿ ಇತ್ತೀಚೆಗೆ ಹೆಚ್ಚಾಗಿ ನೋಯುತ್ತವೆ. ಮೊದಲಿನಕಿಂತಲೂ ಕಡಿಮೆ ಕಾಣುವವೆನ್ನುವಿ! ಬಿಸಿಲಿನಿಂದ ಹೆಚ್ಚಾಗಿ ಅಪಾಯವಾಗಲಿಕ್ಕಿಲ್ಲವೇನೋ?"

"ಜಾನ್ಹವಿಯ ಲಗ್ನ ಕೂಡಿ ಬಂದಿದೆ. ಅತ್ತಕಡೆಗೆಯೇ ಹೊರಟಿರುವೆ. ಈಗ ನಾವು ಹೆಣ್ಣಿನ ಕಡೆಯವರೆಂದ ಮೇಲೆ ಎಲ್ಲಿಯ ಬಿಸಿಲು, ಎಲ್ಲಿಯ ಮಳೆ?"

ಚಂದ್ರಶೇಖರನು ತನ್ನ ನಾಟಕದ ಹಸ್ತಲಿಖಿತವನ್ನು ತೆಗೆದುಕೊಂಡು ಹೊರಬಿದ್ದಿದ್ದ. ಕಂಪನಿಯಲ್ಲಿ ವಿಶೇಷವಾಗಿ ಗುರುತಿನ ತನ್ನ ಮಿತ್ರನೊಬ್ಬನನ್ನು ಸಂಗಡ ಕರೆದುಕೊಂಡು ಮಾಲೀಕರ ಕಡೆಗೆ ಹೋದ. ಮಾಲೀಕರಾದರೂ ನಾಟಕಗಳನ್ನು ಗಮನಿಸುವದಕ್ಕೆ ಒಪ್ಪಿದರು. "ಜಾನ್ಹವಿಯ ಗೃಹಗಳೇನೋ ಒಳ್ಳೆಯವಾಗಿ ತೋರುತ್ತವೆ" ಎನ್ನುತ್ತ ಚಂದ್ರಶೇಖರನು ಸಂಪೂರ್ಣವಾಗಿ ಓದಿ ತೋರಿಸಿದ. ವಾಚನವು ಮುಗಿದ ಕೂಡಲೆ ಅವನು ಉತ್ಕಂಠೆಯಿಂದ ಕೇಳಿದ "ಯಾಕೆ, ಏನೆನ್ನಿಸುವದು ನಿಮಗೆ?"

''ಇದೆ. ಸಾಧಾರಣ ನಡೆಯಬಹುದು. ಆದರೆ—"

"ಆದರೆ ಏನು?"

"ನೀವು ಹೊಸಬರಾಗಿದ್ದರಿಂದ ಸ್ವಲ್ಪ ತಪ್ಪುಗಳಾಗಿವೆ. ''ದೇಶದ ಸಲುವಾಗಿ" ಎಂದು ಹೆಸರು ಕೊಟ್ಟಿದ್ದು ಒಳ್ಳೇಯದಾಗಿದೆ. ಆದರೆ ನಾಟಕದಲ್ಲಿ 'ನಾಥ' 'ಪ್ರಿಯು' ಇಂಥ ಶಬ್ದಗಳು ಎಷ್ಟು ಹೆಚ್ಚಾಗಿ ಇದ್ದಷ್ಟು ಒಳಿತು!"

"ಈ ನಾಟಕದಲ್ಲಿಯಂತೂ ಶೃಂಗಾರಕ್ಕೆ ಸ್ಥಳವೇ ಇಲ್ಲ.''

"ಶೃಂಗಾರಕ್ಕೆ ಸ್ಥಳವಿಲ್ಲವೆಂದರೇನು ರಾಯರೆ? ಸ್ಥಳವಿಲ್ಲದಿದ್ದರೆ ಮಾಡಿಕೊಡಬೇಕು. ಹೊಗೆಬಂಡಿಯ ಡಬ್ಬಿಯಲ್ಲಿ ನಾವು ಒಬ್ಬರಿಗೊಬ್ಬರು ಸ್ಥಳ ಮಾಡಿಕೊಡುವದಿಲ್ಲವೆ? ಇದು ನೋಡಿರಿ ಈ ನಾಟಕಕ್ಕೆ ಒಂದಿಷ್ಟು ಶೃಂಗಾರದ ಒಗ್ಗರಣೆ ಕೊಟ್ಟಿತೆಂದರೆ —"

"ಕಲೆಯೆಂದರೆ ಮೂರ್ತಿಮಂತ ಸೌಂದರ್ಯ. ಆದರ ಮೇಲೆ ಈ ರೀತಿಯಾಗಿ ಬರೆಗಳನ್ನು ಕೊಟ್ಟರೆ—''

"ಶಶಿಗೆ ಲಾಂಛನದಿಂದಲೇ ಶೋಭೆ. ಶೃಂಗಾರದ ಸನ್ನಿವೇಶಗಳನ್ನು ಹಾಕಿಕೊಟ್ಟರೆ ಒಂದು ಸಾವಿರ ರೂಪಾಯಿ ಕೊಡುವೆವು. ಈ ನಾಟಕಕ್ಕೆ ಈ ಸೂಚನೆಯು ಚಂದ್ರಶೇಖರನಿಗೆ ಸ್ವಂತ ಮಕ್ಕಳ ಕೈಕಾಲುಗಳನ್ನು ಛಿನ್ನವಾಗಿ ಮಾಡುವಂತೆಯೇ ಅನಿಸಿ ಅವನು ಅವರ ನಿರೋಪ ತೆಗೆದುಕೊಂಡು ಹೊರಟ. ಮರುದಿವಸವೇ ಎಂಟು ದಿವಸಗಳ ರಜೆ ಪಡೆದುಕೊಂಡು ಮಧ್ಯಾನ್ಹದ ಗಾಡಿಗೆ ಮುಂಬಯಿಗೆ ಹೊರಟಿರುವಾಗ ಕಕ್ಕಿಯು ಮುಂಬಯಿಗೆ ಯಾತಕ್ಕೆ ಎಂದು ಕೇಳಿದಾಗ, ಅವ ಹೇಳಿದ–– ರತ್ನಾಕರನ ತಂದೆಯವರು ಮುಂಬಯಿಯಲ್ಲಿರುವರು. ಲಗ್ನದ ವಿಷಯದಲ್ಲಿ ಅವರೊಡನೆ ತುಸು ಮಾತನಾಡಬೇಕಾಗಿದೆ'' ಎಂದು ಹೇಳಿದ.

"ದೈವವಿಲಾಸ" ಮತ್ತು "ಮಹಾತ್ಮಾ ಬುದ್ಧ" ಎಂಬ ತನ್ನ ಎರಡು ನಾಟಕಗಳನ್ನು ಆಲ್ಲಿಯ ಪ್ರಮುಖ ಕಂಪನಿಗಳಲ್ಲಿ ಅವನು ಓದಿ ತೋರಿ

ಸಿದ. ಆತನ ಲೇಖನ ಕೌಶಲ್ಯದ ವಿಷಯದಲ್ಲಿ ವಿಶೇಷವಾಗಿ ಯಾರವೂ ಮತಭೇದವಾಗದಿದ್ದರೂ ಮೊದಲನೆಯ ಕಂಪನಿಯು "ದೈವವಿಲಾಸ"ವು ಶೋಕಪರ್ಯವಸಾಯಿಯಾಗಿದ್ದನ್ನು ಆನಂದಪರ್ಯವಸಾಯಿಯಾಗಿ ಮಾಡಿ ಕೊಡಬೇಕೆಂದು ಸೂಚಿಸಿತು ಮತ್ತು ಎರಡನೆಯದೊಂದು ಕಂಪನಿಯು "ಮಹಾತ್ಮಾ ಬುದ್ಧ" ನಾಟಕವನ್ನು ಯಶಸ್ವಿಯಾಗಿ ಮಾಡುವದರ ಸಲುವಾಗಿ ಅದರಲ್ಲಿ ೪-೫ ವಿನೋದಿಯಾದ ಪಾತ್ರಗಳನ್ನು ಹಾಕಬೇಕೆಂದು ಆಗ್ರಹಪಟ್ಟಿತು. ಹಣವನ್ನು ವೆಚ್ಚಮಾಡಿ ಜನರೇನೂ ಕಣ್ಣೀರು ಸುರಿಯಲಿಕ್ಕೆ ಬರುವದಿಲ್ಲವೆನ್ನುವದು ಮೊದಲನೇ ಕಂಪನಿಯ ಮತವಾಗಿದ್ದರೆ "ವಿನೋದವಿಲ್ಲದೆ ನಾಟಕವೇ ಆಗಲಾರದೆ"ಂಬುವದು ಎರಡನೇದರ ಅನುಭವ ಸಿದ್ಧವಾದ ನಂಬಿಕೆಯಾಗಿತ್ತು. ಅವರ ಈ ಸೂಚನೆಗಳನ್ನೆಲ್ಲ ಕೇಳಿಕೊಂಡು ಖಿನ್ನಮನಸ್ಸಿನಿಂದ ಚಂದ್ರಶೇಖರನು ಬಿಡಾರಕ್ಕೆ ತಿರುಗಿಬಂದ. "ಕಲೆ! ವಿಶುದ್ಧವಾದ ಕಲೆಗೆ ಈ ಜಗತ್ತಿನಲ್ಲಿ ಆಶ್ರಯದಾತೃಗಳು ಯಾರೂ ಇಲ್ಲವೆ? ಸರ್ವಸಾಧಾರಣವಾಗಿ ಚಂದ್ರನ ಕಡೆಗೆ ನೋಡುವವರು ಎಷ್ಟು ಜನ? ಆದರೆ ಗ್ರಹಣ ಹಿಡಿದಾಗ ಮಾತ್ರ ಚಂದ್ರನನ್ನು ನೋಡಲಿಕ್ಕೆ ಜನಸಂದಣಿ! ಧ್ರುವನಕ್ಷತ್ರದ ಹೆಸರು ಕೂಡ ಜಗತ್ತಿನಲ್ಲಿ ಎಷ್ಟೋ ಜನರಿಗೆ ಗೊತ್ತಿರಲಿಕ್ಕಿಲ್ಲ. ಆದರೆ ಶನಿಗೆ ಮಾತ್ರ 'ಸಾಡೇಸಾತಿ'ಯ ಭಯದಿಂದ ಎಲ್ಲರೂ ದಾನಮಾಡುವವರೇ? ಏನು ಮಾಡಲಿ? ಕಲೆಯೋ ಜಾನ್ಹವಿಯೋ? ಯಾರನ್ನು ಬಿಟ್ಟುಬಿಡಲಿ? ಈ ರೀತಿಯಾಗಿ ವಿಚಾರ ಮಾಡುತ್ತ ಕೈಗಳಲ್ಲಿ ಪುಸ್ತಕವನ್ನಿರಿಸಿಕೊಂಡು ಎಷ್ಟೋ ವೇಳೆ ವಿಚಾರ ಮಾಡುತ್ತ ಕುಳಿತಿದ್ದ. ಆದರೆ ವಿಚಾರದೊಂದಿಗೆ ಮನಸ್ಸಿನ ಆವೇಗ ಮಾತ್ರ ಹೆಚ್ಚಾಗುತ್ತಿತ್ತು.

"ಕಲೆಗೆ ಅಂಟಿಕೊಂಡು ನಿಂತೆನಾದರೆ ಜಾನ್ಹವಿಯ ಜನ್ಮವು ವ್ಯರ್ಥವಾಗಬಹುದು. ನನ್ನ ಮನೆಯಲ್ಲಿಯೆ ಈ ಜೀವಂತವಾಗಿ ಅಲೆದಾಡುವ ಕಲೆಯನ್ನು ವರದಕ್ಷಿಣೆಯ ಅಗ್ನಿಯಲ್ಲಿ ಬಲಿಕೊಡುವದು ನನ್ನಿಂದಾಗದು ಜಾನ್ಹವಿಯ ಸಲುವಾಗಿ ಈ ನನ್ನ ಅಪತ್ಯದಂತಿರುವ ಕಲೆಯನ್ನೇ...—"

\+ \+ \+ \+ \+

"ದೈವವಿಲಾಸ" ಮತ್ತು "ಮಹಾತ್ಮಾಬುದ್ಧ" ಈ ಎರಡು ನಾಟಕಗಳನ್ನು ಕಂಪನಿಯವರ ಸೂಚನೆಗಳಿಗನುಸರಿಸಿ ತಿದ್ದಿಕೊಡುವದಕ್ಕೆ ಕಡೆಗೆ ಅವನು ಒಪ್ಪಿ ಎರಡು ತಿಂಗಳ ಅವಧಿಯಲ್ಲಿ ಎರಡೂ ನಾಟಕಗಳು ಅವರಿಗೆ ಮುಟ್ಟಿದೊಡನೆಯೇ ಪ್ರತಿಯೊಂದಕ್ಕೂ ಹದಿನೈದುನೂರುರೂಪಾಯಿ ಕೊಡುವದು. ನಿಶ್ಚಿತವಾಯಿತು. ರಾತ್ರಿಯ ಗಾಡಿಯಿಂದ ಚಂದ್ರಶೇಖರನು ಮುಂಬಯಿಯಿಂದ ತಿರುಗಿ ಹೊರಟ. ನಿತ್ಯದಂತೆ ಆಕಾಶದಲ್ಲಿ ಚಿಕ್ಕೆಗಳು ಹೊಳೆಯುತ್ತಿದ್ದವು. ಆಕಾಶದಿಂದ ಕಡಿದು ಬೀಳುವ ಒಂದು ತಾರೆಯ ಕಡೆಗೆ ಅವನ ಲಕ್ಷ್ಯವು ಒಮ್ಮೆಲೆ ಹೋಯಿತು. ಅವನ ಮುಖದ ಮೇಲಿಂದ ಕರುಣಹಾಸ್ಯವೊಂದು ಹಾಯ್ದು ಹೋಯಿತು.

+ × × × ×

ಮನೆಗೆ ಬಂದ ಕೂಡಲೇ ಜಾನ್ಹವಿ ರತ್ನಾಕರರ ಲಗ್ನವು ಕೂಡಿದ್ದು ಚಂದ್ರಶೇಖರನು ಕಕ್ಕಿಯವರಿಗೆ ತಿಳಿಸಿದ. ಕಕ್ಕಿಯವರಂದರು "ನಿನ್ನಂಥ ಕರ್ತೃತ್ವವಂತನಾದ ಅಣ್ಣನಿದ್ದ ಮೇಲೆ ಅವಳಿಗೆ ಇಂಥ ಉತ್ತಮ ಸ್ಥಳ ಸಿಗುವದೇನಾಶ್ಚರ್ಯ?" ಅವರ ಧ್ವನಿಯಲ್ಲಿ ಆನಂದದ ಪರವಶತೆ ಇತ್ತು.

ಅದೇ ದಿವಸವೇ ಚಂದ್ರಶೇಖರನು ಎರಡನೇ ಕಡೆಗೆ ಕೋಣೆಯೊಂದನ್ನು ಬಾಡಿಗೆಯಿಂದ ಹಿಡಿದು, ತಾನು ಪ್ರತಿದಿವಸ ಸಾಯಂಕಾಲ ರತ್ನಾಕರನಲ್ಲಿಯೇ ಊಟಮಾಡಿ, ಅವನ ಕೂಡವೇ ರಾತ್ರಿಯನ್ನು ಕಳೆಯತಕ್ಕವನೆಂದೂ, ಜಾನ್ಹವಿಗೂ ಕಕ್ಕಿಯವರಿಗೂ ತಿಳಿಸಿದಾಗ ಕಕ್ಕಿಯವರು ನಗುನಗುತ ಕೇಳಿದರು—

"ಬೇಗ ಬೇಗರದು ಈಗಿನಿಂದಲೇ ಇಷ್ಟು ಸಖ್ಯವೇ?"

"ಹೌದು. ಮತ್ತೆ ನಾಳೆ ಲಗ್ನದಲ್ಲಿ ಒಂದಿಷ್ಟು ಹೆಚ್ಚು ಕಡಿಮೆಯಾದರೂ ಸಾಗಿಸಿಕೊಂಡು ಹೋಗುವಂತೆ ಮೊದಲಿನಿಂದಲೇ ವ್ಯವಸ್ಥೆ ಮಾಡಬೇಕಲ್ಲವೇ?"

ಅಂದಿನಿಂದ ಚಂದ್ರಶೇಖರನು, ಐವತ್ತು ಕಥೆಗಳಿಂದ ಐನೂರು ರೂಪಾಯಿಗಳಿಗಾಗಿ, ಮೂರು ನಾಟಕಗಳಿಂದ ನಾಲ್ಕೂವರೆ ಸಾವಿರ ರೂಪಾ

ಯಿಗಳಿಗಾಗಿ ಹಗಲು, ರಾತ್ರಿ ದುಡಿಯಲಾರಂಭಿಸಿದ. ಪರಮಭಕ್ತನೊಬ್ಬನಿಂದ ಕಟ್ಟಲ್ಪಟ್ಟ ದೇವಾಲಯದಲ್ಲಿ ಸಂಸ್ಥಾನಿಕನೊಬ್ಬನಿಂದ ಆ ಭಕ್ತನಿಂದಲೇ ಆ ದೇವಾಲಯದಲ್ಲಿ, ವೇಶ್ಯೆಯ ವಸತಿಯನ್ನು ಮಾಡಿಸಹಚ್ಚಿದಾಗ ಉಂಟಾದ ಭಕ್ತನ ಸ್ಥಿತಿಯಂತೆ ಚಂದ್ರಶೇಖರನ ಸ್ಥಿತಿಯಾಗಿತ್ತು. ತನ್ನ ಹೃದಯ ರಕ್ತದಿಂದ ಬೆಳೆಸಿದ ಕಲಾಲತೆಯ ಮೇಲೆ ಇಂದು ಅವನಿಗೆ ತನ್ನ ಕೊಡಲಿಯ ಪೆಟ್ಟನ್ನು ಹಾಕಬೇಕಾಗಿತ್ತು. ಸುಂದರವಾದ ತಾಜಮಹಾಲಿಗೆ ತಾನೊಂದು ಕುದುರೆಯ ಗೋದಲಿಯ ಸ್ವರೂಪವನ್ನು ಕೊಡುತ್ತಿರುವೆನೆಂಬ ವಿಚಾರಬಂದಾಗ ಅವನಂದುಕೊಳ್ಳುತ್ತಿದ್ದ- "ನಾನೆಂಥ ದೊಡ್ಡಪಾಪ ಮಾಡಹತ್ತಿರುವೆ? ಈಗಿಂದೀಗಲೇ ಹೋಗಿ ಈ ನಾಟಕ, ಕಥೆಗಳನ್ನೆಲ್ಲ ನದಿಯಲ್ಲಿ ಮುಳುಗಿಸಿ ಬಿಡಲೇ? ಮುಳುಗಿಸಿದರೂ ಏನೂ? ಒಳಗಿನ ಕಿಚ್ಚು ಹೇಗೆ ನೊಂದಬೇಕು? ನಾನೇ ಹೋಗಿ ನದಿಯಲ್ಲಿ ಹಾರಿಕೊಂಡು ಬಿಟ್ಟರೆ ಕಲೆಯನ್ನು ಮಣ್ಣುಗೂಡಿಸುವ ಈ ದಾಹವು ಶಾಂತವಾಗಬಹುದೇ?" ಈ ವಿಚಾರ ಬಂದಕೂಡಲೆ ಅವನ ಕಣ್ಣುಗಳ ಮುಂದೆ ನಗುಮೋರೆಯ ಜಾನಕಿಯ ಪ್ರೇಮಲವಾದ ಮೂರ್ತಿಯು ನಿಲ್ಲುವದು. ತಾನು ಬದುಕುವದಾದರೆ ಜಾಹ್ನವಿಯ ಸಲುವಾಗಿಯೇ ಬದುಕಬೇಕು; ಸಾಯುವದಾದರೆ ಅವಳ ಸಲುವಾಗಿಯೇ ಸಾಯಬೇಕೆಂದು, ಅವನ ಭ್ರಾತೃಪ್ರೇಮವು ಹೇಳುತ್ತಿತ್ತು. ತನ್ನ ಕಲೆಯನ್ನು ಛಿನ್ನವಿಚ್ಛಿನ್ನವಾಗಿ ಮಾಡುತ್ತಿರುವಾಗ ತನ್ನ ಕಣ್ಣುಗಳಲ್ಲಿ ತುಂಬುವ ಕಣ್ಣೀರ ಹನಿಗಳೇ ಜಾಹ್ನವಿಯ ಲಗ್ನದ ಮಾಲೆಯನ್ನು ಹೆಣೆಯತಕ್ಕವುಗಳೆಂದು ಅವನು ಕಡೆಗೆ ಸಮಾಧಾನ ಹೇಳಿಕೊಳ್ಳುತ್ತಿದ್ದ.

"ಜಾಹ್ನವಿಯ ಲಗ್ನವನ್ನು ಈಗಲೇ ಯಾಕೆ ಮಾಡಬೇಕು?" ಎಂದು ಅವನ ಕಲಾಭಕ್ತ ಮನಸ್ಸು ಕೇಳುವದು. ಕೂಡಲೇ ಅವನಲ್ಲಿಯ ಕೃತಜ್ಞತೆಯು ಎಚ್ಚತ್ತು ಕೇಳುತ್ತಿತ್ತು. "ಕಕ್ಕಿಯವರಿಗೆ ಜಾಹ್ನವಿಯೆಂದರೆ ಪಂಚಪ್ರಾಣ. ಮೊಮ್ಮಕ್ಕಳ ಆಶಾಪರ ಇಚ್ಛೆ ಅವರಿಗೆ. ನೀನು ನಿನ್ನ ಸ್ವಾರ್ಥಕ್ಕಾಗಿ ಅವಳ ಲಗ್ನವನ್ನು ಮುಂದೆ ಮುಂದೆ ನೂಕಿದರೆ, ಅವರ ಇಚ್ಛೆಯು ಕೊನೆಗಾಣುವದೆಂತು? ಹಿರಿಯರ ಸಲುವಾಗಿ ಕಿರಿಯರು ಸ್ವಾರ್ಥ

ತ್ಯಾಗ ಮಾಡಲೇ ಬೇಕು. ಈಗ ಒಂದು ವೇಳೆ ಅವಳ ಲಗ್ನವನ್ನು ಮಾಡದಿದ್ದರೆ ಕುಬೇರ ಬೃಹಸ್ಪತಿಗಳು ತಾವಾಗಿಯೇ ಬಂದು ಜಾನ್ಹವಿಯನ್ನು ಬೇಡುವ ಆಶೆಯಾದರೂ ಅಷ್ಟರಲ್ಲಿಯೇ ಇದೆ! ತಕ್ಕಡಿಯ ಒಂದು ಪರಡಿಯಲ್ಲಿ ವರದಕ್ಷಿಣೆಯನ್ನು ಹಾಕಿದಹೊರತು ವರ ಪಕ್ಷದ ಎರಡನೇ ಪರಡಿಯು ನೆಲಬಿಟ್ಟು ಏಳಲಾರದ ಸಮಾಜದಲ್ಲಿ ಜಾನ್ಹವಿಯ ಲಗ್ನವನ್ನು ನೀನು ಮಾಡುವವನಾದರೂ ಹೇಗೆ? ಕಕ್ಕನ ಋಣವನ್ನು ನೀನು ಹೇಗೆ ತೀರಿಸುವಿ? ಒಡೆಯನ ಸಲುವಾಗಿ ಪನ್ನಾ ದಾಸಿಯು ಹೊಟ್ಟೆಯ ಮಗುವನ್ನು ಬಲಿ ಕೊಟ್ಟಾಗ, ನೀನು ನಿನ್ನಲ್ಲಿಯ ಕಲಾದೃಷ್ಟಿಯನ್ನು ಬಲಿ ಕೊಡಲು ಹಿಂದು ಮುಂದೆ ನೋಡುವಿ; ಇದೇ ಅಲ್ಲವೇ ನಿನ್ನ ಮಮತೆ?"

ಕೊನೆಗೆ ಕೃತಜ್ಞತೆಗೂ ಪ್ರೇಮಕ್ಕೂ ವಿಜಯ ದೊರೆತು ಚಂದ್ರಶೇಖರನು ತನ್ನ ಕಲಾಪ್ರಧಾನವಾದ ವಾಙ್ಮಯವನ್ನು ವಿಕೃತಿಗೊಳಿಸಿ ಲೋಕಾಭಿರುಚಿಗೆ ಸರಿಯಾಗುವಂತೆ ಮಾರ್ಪಾಟುಗಳನ್ನು ಮಾಡತೊಡಗಿದನು

ಚಂದ್ರಶೇಖರನ ಈ ಕೆಲಸವು ಸುಮಾರು ಒಂದೂವರೆ ತಿಂಗಳವರೆಗೆ ನಡೆದಿತ್ತು. ಈ ಅವಧಿಯಲ್ಲಿ ಅವನು ಕ್ಷಣಮಾತ್ರವೂ ವಿಶ್ರಾಂತಿ ಪಡೆಯದೆ ಕೆಲಸ ಮಾಡಿದ. ನಡುನಡುವೆ ಅವನ ಕಣ್ಣುಗಳು ಬಾಯುತ್ತಿದ್ದವು. ಒಮ್ಮೆರಡು ಸಾರೆ ಕಕ್ಕಿಯವರೂ ಜಾನ್ಹವಿಯೂ ಅವನಿಗೆ ಹೇಳಿದರು ಸಹ. ಅದರೆ ಚಂದ್ರಶೇಖರನು ಅವರಿಗೆ ಸಮಾಧಾನ ಹೇಳುತ್ತಿದ್ದ. "ನಾಲ್ಕು ಜನ ಮಿತ್ರರು ಕೂಡಿದರೆಂದರೆ ಹಾಳುಹರಟೆ ನಡೆಯುವದೇ. ಜಾಗರಣೆಯಂತೂ ದಿನಾಲು ನಡೆಯುವದು. ಮುಂಜಾನೆ ಕೋಳಿ ಕೂಗುವವರೆಗೂ ನಮ್ಮ ಚೀರಾಟ ನಡೆದೇ ಇರುವದು. ಒಮ್ಮೆ ಈ ಬಾಯಿ ಸಾಹೇಬರು ರತ್ನಾಕರನ ಮನೆಗೆ ಹೋದರೆಂದರೆ ಅಲ್ಲಿಂದ ನಮಗೆ ಸಿಗುವದು ಸ್ವಸ್ಥವಾಗಿ ನಿದ್ರೆ, ಮತ್ತು ವಿಶ್ರಾಂತಿ." ಜಾನ್ಹವಿಗೆ ಇದರಿಂದ ಪೂರ್ಣವಾಗಿ ಸಮಾಧಾನವಾಗದಿದ್ದರೂ ಅವಳಿಗೆ ಹೆಚ್ಚಿಗೆ ಹೇಳಲಿಕ್ಕೆ ಬರುವಂತಿದ್ದಿಲ್ಲ.

ಮಾಘಮಾಸದ ಒಂದು ಸುಮುಹೂರ್ತದಲ್ಲಿ ಲಗ್ನವಾಯಿತು. ನಕ್ಷತ್ರ ದರ್ಶನಕ್ಕಾಗಿ ವಧೂವರರು ಹೊರಟಾಗ ಚಂದ್ರಶೇಖರನೂ ಅಲ್ಲಿಯೇ ಇದ್ದ. ರತ್ನಾಕರನು ಚೇಷ್ಟೆಯಿಂದ ಹೇಳಿದ --

"ಇದು ನೋಡು ಚಂದ್ರ! ನಿನಗಾದರೂ ಬೇಗನೆ ನಕ್ಷತ್ರದರ್ಶನ ಪ್ರಸಂಗ ಬರುವದು. ಮೊದಲೇ ನೋಡಿ ಇಟ್ಟರೆ ಆ ವೇಳೆಯಲ್ಲಿ ತಟ್ಟನೇ ಸಿಗುವದು" ಚಂದ್ರಶೇಖರನು ಮೇಲಕ್ಕೆ ನೋಡಿದ, ಕಣ್ಣುಗಳನ್ನು ಕಿವಚಿ ನೋಡಿದ, ದಿಟ್ಟಿಸಿ ನೋಡಿದ—ಆದರೆ ನಕ್ಷತ್ರವು ಆತನಿಗೆ ಮುಸುಕಾಗಿಯಾದರೂ ಕಾಣಲಿಲ್ಲ.

× × × ×

"ಚಂದ್ರಶೇಖರ! ಲಗ್ನವಾದನಂತರ ನನ್ನದೂ ನಿನ್ನದೂ ಇದೇ ಮೊದಲು ಭೆಟ್ಟಿಯಲ್ಲವೇ? "

"ಹೌದು." ರತ್ನಾಕರನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಚಂದ್ರಶೇಖರ ಹೇಳಿದ. "ಆದರೆ ನಿನ್ನ ಭೆಟ್ಟಿಯ ಆನಂದವನ್ನು ಹೃದಯದ ವರೆಗೆ ಕರೆದೊಯ್ಯಲಿಕ್ಕೆ ನನ್ನ ಕಣ್ಣುಗಳು ಸಮರ್ಥವಾಗಿಲ್ಲ. ಕತ್ತಲೆ! ಎತ್ತ ನೋಡಿದರೂ ತಿಮಿರಾಂಧಃಕಾರ! ರತ್ನಾಕರ, ರಾತ್ರಿಯ ಆಯುಷ್ಯದಲ್ಲಿ ಅಮಾವಾಸ್ಯೆಯು ಬರುವದು ತಿಂಗಳಿಗೆ ಒಮ್ಮೆಯೇ. ಆದರೆ ಇನ್ನುಮುಂದೆ ನನ್ನ ಇಡೀ ಆಯುಷ್ಯದ ಕೊನೆಯ ವರೆಗೂ ಅಮಾವಾಸ್ಯೆಯೇ ಬಂದುಬಿಟ್ಟಿದೆ. ದೇವರು ಕೊಟ್ಟ ಕಣ್ಣುಗಳಿಂದ ಸಮಾಜವು ಸಾವಿರಾರು ಜನರಿಗೆ ನೋಡಗೂಡದಿದ್ದಾಗ, ನನ್ನಂಥ ಒಬ್ಬ ಕುರುಡನ ಕಥೆ ಏನು?"

"ತತ್ವಜ್ಞಾನದ ಹೊರ ಹೊಳಪಿನಿಂದ ದುಃಖದ ಭಯಾನಕವಾದ ರೂಪವೇನೂ ಮುಚ್ಚುವದುಂಟೆ? ಆದರೆ ಚಂದ್ರ, ನಿನ್ನ ಕಣ್ಣುಗಳು ಹೀಗೆ ಹೇಗೆ ಒಮ್ಮೆಲೆ ಈ ಸ್ಥಿತಿಗೆ ಬಂದುಬಿಟ್ಟವು?"

"ಒಮ್ಮೆಲೆ ಹೇಗೆ ಎನ್ನುವಿಯಾ? ನಿನ್ನ ಲಗ್ನದ ದಿವಸ ನೀನು ನನಗೆ ನಕ್ಷತ್ರ ನೋಡಲಿಕ್ಕೆಂದು ಕರೆದಿ. ಆದರೆ ಏನು ಮಾಡಿದರೂ

ನನಗೇನೂ ನಕ್ಷತ್ರ ಕಾಣಲಿಲ್ಲ. ಮರುದಿವಸವೇ ನಾನು ಡಾಕ್ಟರರ ಕಡೆಗೆ ಹೋದಾಗ ಅವರು ಹೇಳಿದರು--- "ಒಂದು ತಿಂಗಳು ಮೊದಲು ಬಂದಿದ್ದರೆ ಕಣ್ಣುಗಳನ್ನು ಕಟ್ಟಿ ಇಟ್ಟು ಏನಾದರೂ ಉಪಾಯಮಾಡಲಿಕ್ಕೆ ಬರುವಂತಿತ್ತು. ಅವನೂ ಬೇಕಾದಷ್ಟು ಪ್ರಯತ್ನಪಟ್ಟ. ಆದರೆ ಒಡೆದ ನಾವನ್ನು ತೇಲಿಸುವರಾರು?"

ಜಾನ್ಹವಿಯು ಆರತಿ ತೆಗೆದುಕೊಂಡು ಬಂದಳು. ಅವಳು ಗರ್ಭವತಿಯಾಗಿದ್ದರೂ ಲಗ್ನವಾದನಂತರ ಮೊದಲನೇ ದೀಪಾವಳಿಗೆ ಬಂದದ್ದರಿಂದ ಕಕ್ಕಿಯವರ ಸಮಾಧಾನಕ್ಕಾಗಿ ರತ್ನಾಕರನು ಹೆಂಡತಿಯೊಂದಿಗೆ ಬರಬೇಕಾಗಿ ಚಂದ್ರಶೇಖರನು ದಸರೆಯ ದಿವಸವೇ ಪತ್ರ ಬರೆದಿದ್ದ. ಚಂದ್ರಶೇಖರನು ತನ್ನ ಹಸ್ತಾಕ್ಷರಗಳನ್ನು ಕೊನೆಯ ಬಾರಿ ನೋಡಿದ್ದೆಂದರೆ ಅದೇ ಪತ್ರದಲ್ಲಿಯೇ.

"ತನ್ನ ಮೊದಲನೆಯ ನಾಟಕವನ್ನು ಇಂದು ನೋಡಲಿಕ್ಕೆ ಸಿಗುವದಿಲ್ಲೆಂದು ಅಣ್ಣನು ಎಷ್ಟು ಉದಾಸೀನನಾಗಿಬಿಟ್ಟಿದ್ದಾನೆ." ಜಾನ್ಹವಿಯು ಅಂದಳು—

"ಛೀಃ! ಕಣ್ಣು ಹೋದ ಬಗ್ಗೆ ನನಗೆ ದುಃಖವಾದದ್ದೇನೋ ನಿಜ. ಆದರೆ ಅದರ ಕಾರಣವೆಂದರೆ, ನಿನ್ನ ಮುದ್ದು ಮೊಗ ನನಗೆ ನೋಡಲಿಕ್ಕೆ ಸಿಗುವದಿಲ್ಲವಲ್ಲಾ ಎಂದು. ನಾಟಕದ ವಿಷಯವಾಗಿ ಹೇಳಬೇಕಾದರೆ, ದೇವರು ನನ್ನ ಕಣ್ಣುಗಳನ್ನು ಸರಿಯಾದ ವೇಳೆಗೆ ಕಳೆದುಬಿಟ್ಟ."

"ಅಣ್ಣಾ ನೀನು ಏನು ಹೇಳುವಿಯೋ! ನಿನ್ನದಂತೂ ಎಲ್ಲವೂ ವಿಚಿತ್ರವಾಗಿದೆ."

"ವಿಚಿತ್ರವೇನಿದೆ ಇದರಲ್ಲಿ. ಇಂದು ರಂಗಭೂಮಿಯ ಮೇಲೆ ನನ್ನ ಕಲೆಯನ್ನು ಮಣ್ಣುಗೂಡಿಸುವದನ್ನು ನೋಡುವದಕ್ಕಿಂತ ಮೊದಲಿಗೆಯೇ ನನ್ನ ಕಣ್ಣುಗಳನ್ನು ದೇವರು ಕಸಿದುಕೊಂಡ, ಇದು ಎಂಥ ದೊಡ್ಡ ಭಾಗ್ಯ ನನ್ನದು?"

ಜಾಹ್ನವಿಯು ಆತನನ್ನು ಕೈಹಿಡಿದು ಕೂಡಿಸುತ್ತ ಹೇಳಿದಳು—"ಅಣ್ಣಾ, ಇಲ್ಲಿ ಕೂಡು ಮಣೆಯ ಮೇಲೆ. ನಾನೀಗ ಆರತಿ ಬೆಳಗುವೆ."

"ಇಂದು ನನ್ನ ಮನೆಯಲ್ಲಿಯೇ ಕುರುಡನ ಭಾವಬಿದಿಗೆ ನಡೆದಿದೆಯಲ್ಲ. ವಾಙ್ಮಯದಲ್ಲಿ ಕಲೆಯಲ್ಲಿ, ಇಡೀ ಆಯುಷ್ಯದಲ್ಲಿ, ಅಹೋರಾತ್ರಿ, ಕುರುಡನ ಭಾವಬಿದಿಗೆಯೇ ನಡೆದಿರುತ್ತದೆ. ದೃಷ್ಟಿಹೀನವಾದ ಜಗತ್ತಿಗೆ, ಸೌಂದರ್ಯದ ಕುಂಕುಮ ತಿಲಕವನ್ನಿಟ್ಟು, ಸತ್ಯದ ಅಕ್ಷತೆಗಳನ್ನೇರಿಸಿ, ಕಲೆಯು ಆರತಿಯನ್ನು ಬೆಳಗಲಿಕ್ಕೆ ಬಂದರೆ ಅಣ್ಣಂದಿರು ಆರತಿಯಲ್ಲಿ ಹಾಕುವದಾದರೂ ಏನು? ಅವಳ ಕಣ್ಣು ಮೂಗುಗಳನ್ನು ಕೊಯ್ದು ಬಿಡುವ ಶಿಕ್ಷೆ ಅಲ್ಲವೆ?

ಚಂದ್ರಶೇಖರನಿಗೆ ಮನಕ್ಷೋಭವು ಅನಿವಾರವಾಯಿತು. ಕರುಣಾಪೂರಿತವಾದ ದನಿಯಲ್ಲಿ ಹೇಳಿದ.

**ಕರಿಯ ಮೋಡವು ತಿಳಿಮುಗಿಲನಾ--**
**ವರಿಸಿ ಸೂರ್ಯನ ಬೆಳಕನೆಲ್ಲವ**
**ಮರೆಯಗೈದಿರೆ ಉದುರುತಿರೆ ಮಾಮರದ ಕೆಂದರಳು!!**

ಅವನಿಗೆ ಮುಂದೆ ಮಾತು ಹೊರಡದಾಯಿತು. ಜಾಹ್ನವಿಯು ಆರತಿಯನ್ನು ಬೆಳಗಿದಳು. ಆ ಪ್ರತಿಭಾಸಂಪನ್ನ ಕವಿಯ ಹಿಂಡಿದಂತಾಗಿದ್ದ ಹೃದಯವು ಕಂಬನಿಗಳ ರೂಪದಿಂದ ಅವಳ ಆರತಿಯ ತಬಕದಲ್ಲಿ ಇಳಿದು ಬಿಟ್ಟಿತು.

---

# ದೃಷ್ಟಿಲಾಭ.



ಸಮಾಜ ವೃಕ್ಷದ ತುದಿಯಲ್ಲಿರುವ ದ್ರವ್ಯಪ್ರಾಪ್ತಿ, ಮತ್ತು ದೇಶಭಕ್ತಿ, ಎಂಬ ಎರಡೂ ಹಣ್ಣುಗಳನ್ನು ನಾನು ವರ್ತಮಾನಪತ್ರದ ಒಂದೇ ಕಲ್ಲಿನ ಹೊಡತದಿಂದ ಕೆಡವಿದ್ದೆನೆಂಬದರಲ್ಲಿ ಸಂಶಯವಿಲ್ಲ. ಸಂಪಾದಕನಾದ ಕೂಡಲೇ ವಿದ್ಯಾಪೀಠಗಳ ಶಿಕ್ಷಣಕ್ರಮದ ಮೇಲೆ ಕೈಯೆತ್ತಿದೆ. ರಾಜಕಾರಣದಲ್ಲಿ ಗಾಂಧಿಯವರಿಗೆ ಕೂಡ ಸಲಹೆಗಳನ್ನು ಸೂಚಿಸತೊಡಗಿದೆ. ಸುಧಾರಕರಂತೂ ದೇಶದಲ್ಲಿರಕೂಡದಂತೆ ಟೀಕಾಸ್ತ್ರವನ್ನು ಬಿಡಹತ್ತಿದೆ. ಸುಧಾರಕರ ದ್ವೇಷಿಯೆಂದೂ, ಸನಾತನಿಗಳ ಪೋಷಕನೆಂದೂ ನಾನು ವಿಶೇಷವಾಗಿ ಕೀರ್ತಿಗಳಿಸಿದೆ. ಜಿಲ್ಹೆಯಲ್ಲಿ ಏನಾದರೂ ಹೊಸದು ಬಂದಿತೆಂದರೆ, ದೊಡ್ಡ ದೊಡ್ಡ ಶಬ್ದ, ಉದ್ಗಾರ ಚಿಹ್ನಗಳೇ ಮೊದಲಾದ ಸಾಧನಗಳಿಂದ ಅವುಗಳ ವಿರುದ್ಧವಾಗಿ ಸಾಗಿಹೋಗುತ್ತಿದ್ದೆ ದೇವರ ಮುಂದೆ, ಕುರಿ, ಕೋಣ, ಕೋಳಿ ಮುಂತಾದವುಗಳ ಬಲಿಕೊಡುವದರ ಸಮರ್ಥನೆ ಮಾಡುವಾಗ “ಮಾಂಸಾಹಾರಿಗಳು ದಿನಾಲು ಸಾವಿರಾರು ಪ್ರಾಣಿಗಳ ಸಂಹಾರ ಮಾಡುತ್ತಿರುವರು; ಅವುಗಳಲ್ಲಿ ಇವು ೪-೮ ಹೆಚ್ಚಾಗಿ ಭರತಿಬಿದ್ದರೆ ತಪ್ಪೇನು?” ಎಂದು ಬರೆಯಲಿಕ್ಕೆ ನಾನೇನೂ ಹಿಂದೆ ಮುಂದೆ ನೋಡುತ್ತಿರಲಿಲ್ಲ.

ಪ್ರೌಢವಿಧವೆಯ ಪುನರ್ವಿವಾಹದ ವಿಷಯದಲ್ಲಿ ನಾನು ಇಂದೇ ಒಂದು ಉಜ್ವಲವಾದ ಲೇಖವನ್ನು ಬರೆದೆ “ಸೀತಾ ದ್ರೌಪದಿಯರಂಥ ಪತಿವ್ರತೆಯರಾಗಿ ಹೋದ ಹಿಂದುಸ್ಥಾನದಲ್ಲಿ ಹೆಂಗಸರು ಇಂದು ಹೀಗೆ ಬೆನ್ನುತಿರುವಿ ನಿಲ್ಲಬೇಕೆ? ಏನು ಹಿಂದೂ ಧರ್ಮದ ಅವನತಿ ಇದು!!! ಲಗ್ನದಲ್ಲಿಯೇ ಅಂತಹದೇನು ಹುಗಿದಿಟ್ಟ ನಿಧಿಯಿದೆ? ತಮ್ಮ ಆಪ್ತೇಷ್ಟರ ಮನೆಗಳಲ್ಲಿ ಅಡಿಗೆ ಮಾಡುವದು, ಅವರ ಅರಿವೆಗಳನ್ನು ಒಗೆಯುವದು, ಅವರ ಚಿಕ್ಕಮಕ್ಕಳನ್ನಾಡಿಸುವದು, ಮುಂತಾದವುಗಳಿಂದ ಉಂಟಾಗಬಹು

ದಾದ ಸಾತ್ವಿಕ ಸುಖಕ್ಕಿಂತಲೂ ಲಗ್ನದಿಂದುಂಟಾಗುವ ತಾಮಸ ಸುಖವು ಹೆಚ್ಚು ಮಹತ್ವದ್ದಾಗಿದೆಯೇ? "ಪರೋಪಕಾರಾಯ ಸತಾಂ ವಿಭೂತಯಃ" ಎಂಬ ಕವಿವಚನದಂತೆ ನೋಡಲಾಗಿ ವಿಧವೆಯೆಂದರೆ ವಿಭೂತಿಯು. ತಮ್ಮ ವಿಭೂತಿ ಪದವನ್ನು ಬಿಟ್ಟು ಅವರು ಸಾಮಾನ್ಯ ವ್ಯಕ್ತಿಗಳಾಗು ವದೆಂದರೆ ಅವರ ಅಧಃಪಾತವೇ ಸರಿ. ಮದ್ಯ, ಮಾಂಸ, ಮತ್ತು ಮೈಥುನ ಇವುಗಳ ಕಡೆಗೆ ಸಕಲಪ್ರಾಣಿ ಮಾತ್ರಕ್ಕೂ ಪ್ರವೃತ್ತಿ ಇದ್ದೇ ಇರುವ ದೆಂದು ಮನುಮುನಿಯೇ ಹೇಳಿರುವನು. ಆದರೆ ನಿವೃತ್ತಿಯೇ ಹಿಂದೂ ವಿಧವೆಯರ ಮುಖ್ಯ ಗುಣವಾಗಿದೆ. ಸಧವೆಗೆ ಪತಿಯೇ ದೇವರಾಗಿ ದ್ದಂತೆ ವಿಧವೆಗೆ ದೇವರೇ ಪತಿಯು." ಎಂಬ ವಾಕ್ಯಗಳಿಂದ ಲೇಖನವನ್ನು ಮುಗಿಸಿ, ತಿರುಗಾಡಲಿಕ್ಕೆ ಹೋಗುವ ವೇಳೆಯಾದ್ದರಿಂದ, ಆ ಲೇಖವನ್ನು ಜೇಬಿನಲ್ಲಿರಿಸಿ, ಪ್ರೊಫೆಸರ ಜೋಶಿಯವರ ಮನೆಯ ಕಡೆಗೆ ಹೋದೆ.

ಪ್ರೊ. ಜೋಶಿಯವರು ಪುಣೆಯಲ್ಲಿಯ ಒಂದು ಕಾಲೇಜಿನಲ್ಲಿ ಇಂ ಗ್ರೇಜೀ ಮತ್ತು ಮರಾಠೀ ವಿಷಯಗಳ ಪ್ರೊಫೆಸರರಿದ್ದು ನಮ್ಮೂರು ಅವ ರಿಗೆ ಅತ್ತೆಯ ಮನೆಯಾಗಿದ್ದದರಿಂದ ಅವರು ಒಂದೆರಡು ದಿನ ಪೂರ್ವ ದಲ್ಲಿ ಇಲ್ಲಿಗೆ ಬಂದಿದ್ದರು. ತಾವಾಗಿಯೇ ನನ್ನ ಗುರುತು ಮಾಡಿಕೊಂಡ ದ್ದರಿಂದ ಅವರೊಬ್ಬರು ಅಧುನಿಕ ಕವಿಗಳಾಗಿದ್ದರೂ ಕೂಡ ಅವರ ವಿಷ ಯದಲ್ಲಿ ನನಗೆ ವಿಶೇಷವಾಗಿ ಆದರವೆನಿಸುತ್ತಿತ್ತು. ಈ ಹೊತ್ತಿನ ಲೇಖ ವನ್ನು ಅವರಿಗೆ ಓದಿ ತೋರಿಸಬೇಕೆಂದೇ ನಾನು ಅದನ್ನು ನನ್ನ ಜೊತೆ ಯಲ್ಲಿ ತೆಗೆದುಕೊಂಡು ಬಂದಿದ್ದೆ.

ನಾನು ಜೋಶಿಯವರ ಮನೆಗೆ, ಅಂದರೆ ಅವರ ಅತ್ತೆಯ ಮನೆಗೆ ಹೋದಾಗ ಅವರು ಯಾವದೋ ಒಂದು ಕವಿತೆಯನ್ನು ಗಟ್ಟಿಯಾಗಿ ಓದುತ್ತಿದ್ದರು. "ಬರ್‍ರಿ, ಸಂಪಾದಕರೇ" ಎಂದು ನನ್ನ ಸ್ವಾಗತಮಾಡಿ ಅವರು ನನಗೆ ಕೇಳಿದರು. 'ಕೇಶವ ಸುತ'ನ ಈ ಕವಿತೆಯನ್ನು ನೀವು ಓದಿರುವಿರೇನು?"

"ಎಲ್ಲಿಯ 'ಕೇಶವಸುತ'ನನ್ನು ತೆಗೆದುಕೊಂಡು, ಕುಳಿತಿರುವಿರಿ ಪ್ರೋಫೆಸರ ಸಾಹೇಬ. ಮೋರೋಪಂತರ ಪಾಸಂಗಕ್ಕೂ ಹತ್ತಲಿಕ್ಕಿಲ್ಲ ನಿಮ್ಮ ಈ 'ಕೇಶವಸುತ'!"

"ಕಾವ್ಯದ ಬೆಲೆಯನ್ನೇನು ಗ್ರಂಥದ ತೂಕದ ಮೇಲಿಂದ ಕಟ್ಟತಕ್ಕದ್ದೆ?" ಜೋಶಿಯವರಂದರು.

"ಏನು ಹೇಳಲಿ; ನಿಮ್ಮ ಈ ಆಧುನಿಕ ಕವಿತೆಯ ವಿಷಯಗಳನ್ನು? "ತುತೂರಿ"ಎಂತೆ! ವೇದಾಂತ, ಭಾರತ, ಭಾಗವತ, ಇವೆಲ್ಲವೂ ಹೋಗಿ "ತುತೂರಿ"ಯೇ ಯಾಕೆ ಸೇರಿತೋ ಈ ಮಗನಿಗೆ? ಇವರೇನು? ನಾಳೆ ಒಬ್ಬ ಕರಡಿಯ ಡೊಳ್ಳಿನ ಮೇಲೂ ಕವಿತೆ ಬರೆದರೂ ಬರೆದರೇ ಮತ್ತೆ! 'ಒಡಕು ಗಡಿಗೆ!' ಇದೇನು ಕವಿತೆಯ ಹೆಸರೇ? ಹಾಗಾದರೆ 'ಹರಕು ಚಪ್ಪಲಿ' ಇದಾದರೂ ಕೆಟ್ಟ ವಿಷಯವಾಗಲಿಕ್ಕಿಲ್ಲ!!"

"ಆ ವಾದವನ್ನು ನಾವು ಆಮೇಲೆ ಮಾಡೋಣವಂತೆ. 'ಕೇಶವಸುತ'ನ ಈ ಎರಡು ಪಂಕ್ತಿಗಳನ್ನಾದರೂ ಓದಿ ನೋಡಿರಿ.—"

**ಮನವರಿತರ್ಥವನರಿಸಲು**
**ದಿನಬಳಕೆಯ ವಸ್ತುಗಳೊಳಗೆನಿತೊಂದಿಹುದು।**
**ದಿನ ದಿನ ಕಾಣುವದೆಲ್ಲವ**
**ಮನವಿಲ್ಲದೆ ನೋಡುವವರ ಕಂಗಳ ಫಲವೇಂ।**

"ಏನಾದರೂ ಇದೆ ಹೇಳಿರಿ ಈ ಪಂಕ್ತಿಗಳಲ್ಲಿ? ಜ್ಞಾನೇಶ್ವರನಂಥ ಉಪಮೆಯಾದರೂ ಇದೆಯೇ, ಅಥವಾ ಮೋರೋಪಂತನಂಥ ಯಮಕವಾದರೂ ಇದೆಯೇ. ಏನಿದೆ ಇದರಲ್ಲಿ?"

"ವಾಚಕನಿಗೆ ಕಾವ್ಯದೃಷ್ಟಿಕೊಡುವ ಸಾಮರ್ಥ್ಯವಿದೆ"

ಪ್ರೊಫೆಸರ ಸಾಹೇಬರು ಅರಿವೆಗಳನ್ನು ಹಾಕಿಕೊಂಡು ಹೊರಗೆ ಹೊರಟ ಮೂಲಕ ಆ ವಾದವು ಅಲ್ಲಿಯೇ ನಿಂತಿತು. ಸಮುದ್ರದವರೆಗೂ ನಾವು ತಿರುಗಾಡಲಿಕ್ಕೆ ಹೋಗತಕ್ಕವರಿದ್ದ ಮೂಲಕ, ಅದನ್ನು ಅಲ್ಲಿಯೇ

ಓದಿತೋರಿಸಬೇಕೆಂದು ನಿಶ್ಚಯಿಸಿದೆ. ಜೋಶಿಯವರು 'ಮೋತ್ಯಾ' ನಾಯಿಯನ್ನು ಸರಪಳಿಯ ಬಂಧನದಿಂದ ಬಿಡಿಸಿ ಅಂಗಳದಾಟಿ ಹೊರಗೆ ಬರುವಷ್ಟರಲ್ಲಿ ಒಂದು ಹೊಲಸು ನಾಯಿಯು ಕುಂಟುತ್ತ ನಮ್ಮೆಲ್ಲರ ಬೆನ್ನು ಹತ್ತಿದ್ದನ್ನು ನಾನು ನೋಡಿದೆ.

"ಇದು ಎಲ್ಲಿಯ ಪೀಡೆ ಬೆನ್ನುಹತ್ತಿತು ಮತ್ತೆ?" ನಾನಂದೆ.

"ಎರಡು ದಿವಸವಾಯಿತು ಇಲ್ಲಿಯೇ ಅಂಗಳದಲ್ಲಿ ಕುಳಿತುಕೊಂಡು ಬಿಟ್ಟಿದೆ. ಅದರ ಮೋಜು ಬಂದಿತೇನು ನಿಮ್ಮ ಲಕ್ಷ್ಯದಲ್ಲಿ?"

"ಅದರದೇನು ಮೋಜು? ಕುಂಟುತ್ತಿರುವದಷ್ಟೆ! ಅಲ್ಲವೆ?"

"ತಾನಿರುವದು ತ್ರೈಮೂರಲಂಗನಾದರೂ, ಸಾಗಿ ಹೊರಟಿರುವದು ಸಮುದ್ರದ ಮೇಲೆ. ವಿಷಯವೇನೋ ಸಹಜವಾದದ್ದು. ಆದರೆ ಅರ್ಥವೆಷ್ಟುನೋಡಿರಿ ಅದರಲ್ಲಿ! ಈ 'ಮೋತ್ಯಾ' ಎಲ್ಲಿ ತಿರುಗಾಡಲಿಕ್ಕೆ ಹೋಗುವನೋ ಅಲ್ಲಿಯೇ ತಾನೂ ಹೋಗಬೇಕೆಂದು ಅದರ ಹಂಬಲ. ಎಷ್ಟು ಬೇಕಾದಷ್ಟು "ಹಚ,ಹುಚ" ಮಾಡಿರಿ, ಏನು ಬೇಕಾದ್ದನ್ನು, ಮಾಡಿರಿ ಅದೇನೂ ನಮ್ಮ ಬೆನ್ನು ಬಿಡುವದಿಲ್ಲ"

ಆ ಕುಂಟ ನಾಯಿಯನ್ನು ನಾನು ಸ್ವಲ್ಪ ಬೆದರಿಸಿ ನೋಡಿದೆ. "ಕೋಂಯಿ ಕೊಂಯಿ" ಎನ್ನುತ್ತ ಅದು ಆದರಪೂರ್ವಕ ತುಸು ಹಿಂದಕ್ಕೆ ಸರಿಯಿತು. ಆದರೆ ಸ್ವೀಕೃತಮಾರ್ಗದಿಂದ ತೊಲಗದ ಮಹಾತ್ಮನಂತೆ, ಅದು ಮತ್ತೆ ನಮ್ಮ ಬೆನ್ನ ಹಿಂದಿನಿಂದಲೇ ಬರತೊಡಗಿತು.

ದಾರಿಯ ಒಂದು ಬದಿಯಲ್ಲಿ ಮುಳುಗಳ್ಳಿಯು ಬೆಳೆದಿತ್ತು. ಕಮಲಗಳಂತೆ ಕಾಣುವ ಆ ಹೂವುಗಳ ಕಡೆಗೆ ಬೊಟ್ಟುಮಾಡಿ ತೋರಿಸುತ್ತ ಪ್ರೊಫೆಸರರು ಅಂದರು. "ಇಲ್ಲಿ ನೋಡಿದಿರಾ, ಆಶ್ಚರ್ಯ?" ನಾನು ನೋಡಿದೆ ಮುಳ್ಳುಸುಂಕುಗಳಿಗಾಗಿ ಹೆಸರಾದ ಹೂವುಗಳು ಅದೇ ಕಣ್ಣು ತೆರೆದು ಜಗದ ಕಡೆಗೆ ನೋಡುತ್ತಿದ್ದವು.

"ಮೈಯೆಲ್ಲವೂ ಮುಳ್ಳು ಸುಂಕಗಳಿಂದ ತುಂಬಿ ಹೋಗಿದ್ದರೂ ಅದರ ಹೃದಯವು ಅರಳಿಯೇ ಅರಳುವದು. ಈ ಮುಳುಗಳ್ಳಿಯ ಹೂವು ಗುಲಾಬಿ, ಜಾಜಿ, ಮಲ್ಲಿಗೆಗಳಿಗಿಂತ ಯಾವರೀತಿಯಿಂದಲೂ ಬೇರೆಯಾಗಿಲ್ಲ. ನೀವು ಅವುಗಳನ್ನು ದೇವರ ಮೇಲೆ ಏರಿಸಬೇಡಿರಿ ಬೇಕಾದರೆ. ಆದರೆ ಆ ಹೂಗಳು ಮಾತ್ರ ತಮಗೆ ಅರಳುವ ಸಂಧಿ ಸಿಕ್ಕಿತೆಂದು ಆನಂದ ಪಡುತ್ತಿರುವವು."

ಆ ಕುಂಟ ನಾಯಿ ಮತ್ತು ಈ ಮುಳುಗಳ್ಳಿಯ ಹೂವುಗಳು, ಇವೆರಡರ ಜಾತಿಯೊಂದೇ ಎಂದು ನಾನು ವಿಚಾರ ಮಾಡುತ್ತ ನಡೆದಿರುವಾಗ ಎದುರಿನಿಂದ ಒಬ್ಬ ಬಿಕ್ಕೆ ಬೇಡುವವಳು ಬಂದಳು. ಅವಳ ಹರಕು ಬಟ್ಟೆಗಳು, ಹೆಗಲಿಗೆ ಹಾಕಿದ ಅವಳ ಜೋಳಿಗೆ, ಇಡೀ ಆಯುಷ್ಯದಲ್ಲಿ ಎಣ್ಣೆಕಾಣದ ಅವಳ ಕೂದಲು, ಇವೆಲ್ಲವುಗಳನ್ನು ನೋಡಿ ನಾನಂತೂ ಮೋರೆಯನ್ನೇ ತಿರುವಿದೆ. ಅವಳು ನಮ್ಮನ್ನು ದಾಟಿ ಹೋದ ಮೇಲೆ ಪ್ರೊಫೆಸರರು ಕೇಳಿದರು. "ನೋಡಿದಿರಾ?"

"ಏನು?"

ಅವರು ಹಿಂದಕ್ಕೆ ತಿರುಗಿ ಆ ಭಿಕ್ಷುಕಿಯ ಕಡೆಗೆ ಬೊಟ್ಟು ಮಾಡಿ ತೋರಿಸಿದರು. ತನ್ನ ಕೂದಲುಗಳಲ್ಲಿ ಅವಳು ಒಂದು ಬಾಡಿದ ಹೂವನ್ನು ಇರಿಸಿಕೊಂಡಿದ್ದಳು. ಪ್ರೊಫೆಸರರು ಅಂದರು "ಆಚೆಯ ದಾರಿಯಲ್ಲಿ ಬಿದ್ದಿತ್ತು ಆ ಹೂವು. ಎಷ್ಟು ಜನ ತುಳಿದು ಹೋಗಿದ್ದರೊ ಯಾರು ಬಲ್ಲರು? ಅವಳು ಮಾತ್ರ ಅದನ್ನೆತ್ತಿ ಒಳ್ಳೇ ಪ್ರೀತಿಯಿಂದ ತಲೆಯಲ್ಲಿರಿಸಿಕೊಂಡಳು ನೋಡಿರಿ."

ಒಂದೇ ದಿವಸ ಅನೇಕ ವಿಲಕ್ಷಣ ದೃಶ್ಯಗಳನ್ನು ನೋಡಿ ಜಗತ್ತಿನ ವಿಷಯದಲ್ಲಿ ಬುದ್ಧನ ಮತ ಬದಲಾಗಿ ಅವನು ಅರಣ್ಯಕ್ಕೆ ಹೋದಂತೆ, ದೃಢಮೂಲವಾಗಿದ್ದ ನನ್ನ ಮತಗಳಿಗೂ ಬಲವಾದ ಏಟುಗಳು ಬೀಳುವವೇನೋ ಎಂದು ನನಗೆ ಅನಿಸಹತ್ತಿತು. ತುಸು ಮುಂದಕ್ಕೆ ಹೋಗು

ಷಷ್ಟರಲ್ಲಿ ವೈದಿಕನೊಬ್ಬನು ಎರಡು ಆಕಳುಗಳನ್ನು ಹೊಡೆದುಕೊಂಡು ಬರುತ್ತಿದ್ದ. ಅವನು ಪ್ರೊಫೆಸರರಿಗೆ ನಮ್ರನಾಗಿ ನಮಸ್ಕಾರ ಮಾಡಿ ದಾಗ ಅವರು ಅವನಿಗೆ ಪ್ರತಿ ನಮಸ್ಕಾರ ಮಾಡಿದರು. ಅವನು ಹೋದ ಮೇಲೆ ಅವರು ನನಗೆ ಕೇಳಿದರು "ಇವನ ವಿಷಯದಲ್ಲಿ ಗೊತ್ತಿದೆ ಏನು, ನಿಮಗೆ ಏನಾದರೂ? ಸಾಧಾರಣವಾದ ಮಾತೇ ಇದೆ. ಆದರೂ –"

ಈ ಸಾಧಾರಣತನದ ಸಮುದ್ರದೊಳಗಿಂದ ಯಾವ ಯಾವ ರತ್ನ ಗಳು ಹೊರಬೀಳತಕ್ಕವುಗಳೆಂಬುದೇ ನನಗೆ ತಿಳಿಯದಾಯಿತು. ನಾನು ಆಶ್ಚರ್ಯದಿಂದ ಕೇಳತೊಡಗಿದೆ. ಅವರು ಹೇಳಿದರು. "ಇವರು ನಮ್ಮ ಮನೆಯಲ್ಲಿ ದೇವರ ಪೂಜೆ ಮಾಡುವರು. ಒಬ್ಬನೇ ಇರುವ ಬ್ರಾಮ್ಹಣ. ಹೆಂಡರಿಲ್ಲ. ಮಕ್ಕಳಿಲ್ಲ. ಆದರೆ ಮನುಷ್ಯನೆಂದ ಮೇಲೆ ಸುಮ್ಮನೆ ಕೂಡ್ರ ಲಿಕ್ಕೆ ಎಲ್ಲಿ ಆಗುವದು ಹೇಳಿರಿ. ಮಕ್ಕಳಿಲ್ಲದಿದ್ದರೂ ಮರಿಗಳಾದರೂ ಬೇಕು. ಈ ಎರಡು ಆಕಳುಗಳನ್ನು ಸಾಕಿಕೊಂಡು ಇರುವ"

"ಹಾಲು ಮಾರಿಕೊಳ್ಳುತ್ತಿರಬೇಕು! ಮತ್ತೇನು?"

"ಛೀಃ! ತನಗೆ ಚಹದ ಸಲುವಾಗಿ ಬೇಕಾಗುವಷ್ಟೇ ಇಟ್ಟುಕೊಂಡು ಉಳಿದ ಎಲ್ಲ ಹಾಲು ಕರುಗಳಿಗೆ ಬಿಟ್ಟುಬಿಡುವ. ಎಷ್ಟು ಚನ್ನಾಗಿ ಬೆಳೆ ದಿವೆ ಎನ್ನುವಿರಿ, ಹಸುಗಳು! ತನ್ನ ವೈದಿಕಿಯಲ್ಲಿ ದೊರೆತ ಹಣವನ್ನೆಲ್ಲ ಇವನು ಈ ಆಕಳುಗಳಿಗಾಗಿಯೇ ವೆಚ್ಚ ಮಾಡಿಬಿಡುತ್ತಾನೆ!"

"ಆಶ್ಚರ್ಯವಾಗಿದೆ. ಹಾಗಾದರೆ" ದಾರಿಯ ಎಡಗಡೆಗೆ ನೋಡುತ್ತ ನಾನಂದೆ.

"ಆಶ್ಚರ್ಯವೇನಿದೆ ಇದರಲ್ಲಿ? ನಮ್ಮ 'ಮೋತ್ಯಾ'ನ ಹಿಂದಿನಿಂದ ಬರುವ ಆ ಕುಂಟ ನಾಯಿ, ಆ ಮುಳಗಳ್ಳಿಯ ಹೂವುಗಳು, ಆಗಳಿನ ಆ ಭಕ್ಷ್ಣಕಿಯು, ಮತ್ತು ಈ ವೈದಿಕ ಬ್ರಾಹ್ಮಣ ಇವೆಲ್ಲವುಗಳ ಅಂತ ರ್ಯದಲ್ಲಿಯೂ ಒಂದೇ ತತ್ವವಿದೆ. ಜಗತ್ತಿನಲ್ಲಿ ಸಿಕ್ಕಷ್ಟು ಆನಂದವನ್ನು ತನ್ನದನ್ನಾಗಿ ಮಾಡಿಕೊಂಡು ತಬ್ಬಿಕೊಳ್ಳಲಿಕ್ಕೆ ವಸ್ತುಮಾತ್ರವು ಯಾವಾ

ಗಲೂ ಧಡಪಡಿಸುತ್ತಿರುತ್ತದೆ. ಯಾವದರ ಮೇಲಾದರೂ ಮನುಷ್ಯನ ಮನಸ್ಸು ಕೂಡುವದುಂಟು. ಆದರ ಹೊರತು ಆಯುಷ್ಯದ ಉಸುಕಿನ ದಾರಿಯ ಮೇಲೆ ಪ್ರವಾಹವು ಸಾಗುವದಿಲ್ಲ. ಸ್ವಾತಂತ್ರ್ಯದ ಸಲುವಾಗಿ ಹೋರಾಡುವ ರಾಷ್ಟ್ರಗಳು, ಪುನರ್ವಿವಾಹ ಮಾಡಿಕೊಳ್ಳುವ ವಿಧವೆಯರು, ಸಂಪು ಮಾಡುವ ಕೂಲಿಕಾರರು, ಇವರೆಲ್ಲರ ಅಂತಃಕರಣದಲ್ಲಿ ಇದೇ ತತ್ವವಿದೆ. ಎರಡನೆಯವರಿಗೆ ಸಿಗುವಷ್ಟು ಆನಂದ ತನಗೂ ಸಿಗಬೇಕೆಂದು ಪ್ರತಿಯೊಬ್ಬನಿಗೂ ಅನಿಸುವದುಂಟು!"

ಕುರುಡನಿಗೆ ದೃಷ್ಟಿಲಾಭವಾದಂತೆನಿಸಿತು. ಜೇಬಿನೊಳಗಿನ ಆ ಲೇಖವನ್ನು ತೆಗೆದು ಅದನ್ನು ಚೂರು ಚೂರಾಗಿ ಹರಿದು ಗಾಳಿಯಲ್ಲಿ ಬಿಟ್ಟುಬಿಟ್ಟ. ಹಾರಿ ಹೋಗುವ ಆ ಚೂರುಗಳ ಹಿಂದೆ 'ಮೋತ್ಯಾ' ಮತ್ತು 'ಮೋತ್ಯಾ' ನ ಹಿಂದಿನಿಂದ ಆ ಕುಂಟ ನಾಯಿ ಎರಡೂ ಧಾವಿಸಿದವು.

**( ದೃಷ್ಟಿಲಾಭ.--- ೩-೬-೩೭ ರಿಂದ ೧೨-೮-೩೭ )**

---